ನಾರ್ವೆ ದೇಶದ ಬ್‌ಯೋರ್‌ನ್‌ಸನ್ ಕವಿಯ

# ಲಿಯೊನಾರ್ಡಾ

(ನಾಲ್ಕು ಅಂಕಗಳ ನಾಟಕ)

ಇಂಗ್ಲಿಷಿನಿಂದ ಕನ್ನಡಿಸಿದವರು :

ಎಸ್. ಜಿ. ಶಾಸ್ತ್ರಿ

ಮಾರಾಟದ ಪೂರ್ಣಾಧಿಕಾರಿಗಳು :

ಕರ್ಣಾಟಕ ಸಂಘ

ಸೆಂಟ್ರಲ್ ಕಾಲೇಜ್, ಬೆಂಗಳೂರು.

# ಅರಿಕೆ

ಪ್ರಕೃತದ 'ಲಿಯೊನಾರ್ಡ್' ನಾಟಕವನ್ನು ಬರೆದ ಕವಿಯ ಹೆಸರನ್ನು ಕೂಡ ನಮ್ಮಲ್ಲಿ ಅನೇಕರು ಕೇಳಿಲ್ಲದಿರುವುದಾದರೂ ಈ ನಾಟಕವನ್ನು ಕನ್ನಡಕ್ಕೆ ಅನುವಾದ ಮಾಡಿಕೊಟ್ಟಿರುವ ಶ್ರೀ ಎಸ್. ಜಿ. ಶಾಸ್ತ್ರಿಯವರ ಕನ್ನಡದ ಕೆಲಸ ಅನೇಕರಿಗೆ ಗೊತ್ತಿರತಕ್ಕದ್ದು. ಹೌಸ್‌ಮನ್, ಮೇಸ್‌ಫೀಲ್ಡ್, ಇಬ್ಸನ್, ಮ್ಯಾಟರ್‌ಲಿಂಕ್ ಇವರುಗಳನ್ನು ಮೊತ್ತಮೊದಲು ಕನ್ನಡಕ್ಕೆ ತಂದು, ತರಿಸಿಕೊಟ್ಟ ಹೆಸರುವಾಸಿ ಇವರದು. ಸ್ವತಂತ್ರವಾದ ಕೆಲವು ಸಣ್ಣಕತೆಗಳನ್ನೂ ಒಂದು ಮೂರು ಏಕಾಂಕಿಗಳನ್ನೂ ಬರೆದಿರುವರಾದರೂ, ಅದಕ್ಕಿಂತ ಅತಿಶಯವಾಗಿ ಈ ಭಾಷಾಂತರದ ಕಾಣಿಕೆಗಳಿಂದ ಕನ್ನಡಕ್ಕೆ ಹೊಸ ಕಿಟಕಿಗಳನ್ನು ಕಾಣಿಸಿದ್ದಾರೆ. ಹೀಗೆ ಅವರು ತೆರೆದ ಇತ್ತೀಚಿನ ಕಿಟಕಿ, ಎಂದರೆ—ನಾರ್ವೆದೇಶದ ಕವಿಶ್ರೇಷ್ಠರಲ್ಲೊಬ್ಬನಾದ ಬ್‌ಯೋರ್‌ನ್‌ಸನ್ ಎಂಬಾತ ಬರೆದಿರುವ 'ಲಿಯೊನಾರ್ಡ್.'

ಈಗೊಂದು ಮೂರು ನಾಲ್ಕು ವರುಷಗಳಿಂದ ಶ್ರೀ ಶಾಸ್ತ್ರಿಯವರ ಕೋರಿಕೆಯಂತೆ ಅವರ ಕೃತಿರಚನೆಗಳನ್ನು ಒಮ್ಮೆ ಕಣ್ಣಾಡಿಸಿ ಕನ್ನಡಿಗರೆದುರು ತಂದುಬಿಡುವ ಸಂತೋಷದ ಕರ್ತವ್ಯ ನನ್ನ ಪಾಲಿಗೆ ಬಂದಿದೆ. ಹಿಂದಿನ ಒಂದೆರಡನ್ನು ನೋಡಿದಂತೆಯೇ ಇಲ್ಲಿಯೂದರೂ ಅನುವಾದ ಮೂಲದಿಂದ ದೂರವಾಗಿ ಹೋಗದ ಹಾಗೆ ನೋಡಿಕೊಂಡು ತಂದಿದ್ದೇನೆ. ಕವಿಯನ್ನು ಕುರಿತು ಹೇಳಬೇಕಾದ ಪರಿಚಯದ ಮಾತುಗಳನ್ನು ಆರಂಭದಲ್ಲಿ ನಾನು ಹೇಳಿದ್ದೇನೆ; ಕೃತಿಯನ್ನು ಕುರಿತು ಹೇಳಬಹುದಾದ ಪರಿಚಯದ ಮಾತುಗಳನ್ನು ಕೊನೆಯಲ್ಲಿ ಅವರು ಹೇಳಿದ್ದಾರೆ.

ನಾಟಕದ ಕಥಾಸಾರಾಂಶ ಸಾಂಪ್ರದಾಯಿಕವಾಗಿ ನಾಟಕಕ್ಕೆ ಮೊದಲೇ ಬರಬೇಕಾಗಿತ್ತು. ಹಿಂದೆ 'ವೊನ್ನ ವನ್ನ' ನಾಟಕಕ್ಕೆ ಹಾಗೇ ಮಾಡಿದ್ದೆ. ಆದರೆ ವಿಮರ್ಶಕರೊಬ್ಬರು—ಕಥಾಸಾರಾಂಶವನ್ನು ಓದಿದ ಮೇಲೆ ನಾಟಕವನ್ನು ಓದಬೇಕಾದ ಅಗತ್ಯವೇ ಇಲ್ಲ—ಎಂದು ಅರ್ಥಬರುವ ರೀತಿಯಲ್ಲಿ ಒಕ್ಕಣಿಸಿದ್ದರು. ಕಥಾಸಾರಾಂಶವನ್ನು ಮೆಚ್ಚಿ ಪ್ರಶಂಸೆ ಮಾಡುವ ಒಂದು ಉಕ್ತಿವೈಶಿಷ್ಟ್ಯವಿದು ಎಂದು ಉದಾರವಾಗಿ ಭಾವಿಸಿಕೊಳ್ಳಬಹುದಾದರೂ

ಅಂತಹ ಮಾತಿಗೆ ಅವಕಾಶವಾಗದಿರಲೆಂದು ಈ ಸಲ ಅದನ್ನು ನಾಟಕದ ಅನಂತರ ಕೊಟ್ಟಿದ್ದೇನೆ. ನಾಟಕವನ್ನು ನೇರವಾಗಿ ಓದಿ ಅದರೊಳಗೆ ಓಡಿಯಾಡಬಲ್ಲವರಿಗೆ ಇದರಿಂದ ಅಡ್ಡಿಯಾಗುವುದಿಲ್ಲ. ಆದರೆ, ನಾಟಕ ಓದುವ ಮೊದಲು ಸ್ವಲ್ಪ ದಾರಿಯ ಗುರುತು ಬೇಕೆನ್ನುವವರು ಕೊನೆಯ ಸಾರಾಂಶವನ್ನು ಮೊದಲು ಓದಿಕೊಳ್ಳುವುದಕ್ಕೆ ಯಾರದೂ ಅಡ್ಡಿಯಿಲ್ಲ.

ಇನ್ನು ವಾಚಕರಲ್ಲಿ ಒಂದು ವಿಜ್ಞಾಪನೆ: 'ಲಿಯೊನಾರ್ಡಾ' ಸ್ವತಂತ್ರವಾದ ಕನ್ನಡ ನಾಟಕವಲ್ಲ, ಇದರೊಳಗಿನ ಜನರೂ ಅವರ ನಡೆನುಡಿ ಆಚಾರ ವ್ಯವಹಾರಗಳೂ ಕನ್ನಡ ದೇಶದವಲ್ಲ–ಅಷ್ಟೇ ಏಕೆ, ಭರತಭೂಮಿಯದೂ ಅಲ್ಲ–, ಇದು ೧೮೭೯ ರ ಸುಮಾರಿಗೆ, ನಾರ್ವೆದೇಶದಲ್ಲಿ ಇದ್ದ ಸಮಾಜದ ಚಿತ್ರಣಕ್ಕೆ ಹೊಂದಿಕೊಂಡ ನಾಟಕ ಎಂಬುದನ್ನು ದಯವಿಟ್ಟು ಜ್ಞಾಪಕವಿರಿಸಿ ಇದನ್ನು ಓದಬೇಕು. ನಮಗೆ ಸಹಜವಲ್ಲದ ಒಂದು ಲೋಕವನ್ನು ನಾವು ಪ್ರವೇಶಿಸುವುದರಿಂದ ಎಲ್ಲವೂ ಸ್ವಲ್ಪ ಕೃತಕವೆನಿಸಿದರೆ ಅದೇನೂ ಆಶ್ಚರ್ಯವಲ್ಲ. ಅಲ್ಲದೆ, ಯಾರ ಯಾವ ಅನುವಾದವಾದರೂ ಇನ್ನೂ ಉತ್ತಮಪಡಿಸುವುದಕ್ಕೆ ಅವಕಾಶವಿದ್ದೇ ಇರುತ್ತದೆ. ಶ್ರೀ ಡಿ. ವಿ. ಜಿ. ಹೇಳಿದ ಹಾಗೆ—'ಇರುವ ಕಣ್ಣಿನಲಿ ಇರುವ ಬೆಳಕಿನಲಿ ಆದನಿತ ಪರಿಕಿಸಿದೊಡದು ಲಾಭ, ಮಂಕುತಿಮ್ಮ.'

ಇನ್ನೊಂದು ವಿಜ್ಞಾಪನೆ: ಹಿಂದೆ 'ಮೊನ್ನ ವನ್ನ' ನಾಟಕ ಕನ್ನಡದಲ್ಲಿ ಪ್ರಕಟವಾದಾಗ 'ಈ ನಾಟಕಕ್ಕಿಂತ ಆ ನಾಟಕ ಮಾಡಿದ್ದಿದ್ದರೆ ಲೇಸಾಗುತ್ತಿತ್ತು' ಎಂಬ ಟೀಕೆ ಬಂದಿತು. ಇಂಗ್ಲಿಷ್ ಜನ 'ಈ ನಾಟಕದ ಜೊತೆಗೆ ಆ ನಾಟಕ'ವನ್ನೂ ಮಾಡಿಕೊಳ್ಳುತ್ತಾರೆ. 'ಇದಕ್ಕೆ ಬದಲು ಅದು' ಎಂಬ ಕಾರ್ಪಣ್ಯವೆಲ್ಲ ಕಟ್ಟಿಬಂದಿರುವುದು ನಮಗೆ ಮಾತ್ರ ಎಂದು ತೋರುತ್ತದೆ. ಇಲ್ಲಿ ದಿವಂಗತ ಕೈಲಾಸಂ ಅವರ ವಾಕ್ಯವೊಂದನ್ನು ಜ್ಞಾಪಿಸಿಕೊಳ್ಳಬಹುದು —'For what we **have** received, let us truly be thankful.' ಇದು ಒಪ್ಪತಕ್ಕ ಮಾತು. ಒಬ್ಬರು ಅವರ ರುಚಿಗೆ ಪ್ರಿಯವಾದ ಒಂದನ್ನು ಅನುವಾದ ಮಾಡಿಕೊಟ್ಟರು; ಇತರರು ತಮ್ಮ ತಮ್ಮ ರುಚಿಗಳಿಗೆ ಪ್ರಿಯವಾದವುಗಳನ್ನು ಅನುವಾದ ಮಾಡಿಕೊಡಲಿ. ಇದು ಸಾಹಿತ್ಯವನ್ನು ಬೆಳಸುವ ಶಿಷ್ಟಮಾರ್ಗ. ವಿಮರ್ಶಕನ ಬಾಯಿ ಕಟ್ಟಬೇಕೆಂದು ಯಾರೂ ಇಷ್ಟಪಡು

ವುದಿಲ್ಲ. ಆದರೆ, ವಿಮರ್ಶಕನಾಮಕನಾಗಿ ಕಟ್ಟಡದ ಇಟ್ಟಿಗೆಯನ್ನು ಕದಲಿಸಲು ಕೈಯಿಕ್ಕಿದರೆ, ಆ ಕೈಯನ್ನು ಎಚ್ಚರಿಸಬೇಕಾಗುತ್ತದೆ. ಉತ್ತಮವನಾದ ಸಾಹಿತಿಯ ರಚನೆಗಳಲ್ಲಿ ಒಂದೊಂದೂ ಅದರದರ ಮಟ್ಟದಲ್ಲಿ ಅಲ್ಲಲ್ಲಿಗೆ ತಕ್ಕ ಸತ್ತ್ವವನ್ನು ಹೊಂದಿರುತ್ತದೆ. ಆದ್ದರಿಂದ ಆತನನ್ನು ಬರಮಾಡಿಕೊಳ್ಳುವ ಹೊತ್ತಿನಲ್ಲಿ 'ಇದಕ್ಕಿಂತ ಅದು' ಎಂಬ ಮಾತು ಯಾರಿಗೂ ಮರ್ಯಾದೆಯಲ್ಲ. ಇವರು ಇದನ್ನು ತಂದಿದ್ದಾರೆ; ಅವರು ಅದನ್ನು, ಅದಕ್ಕಿಂತ ಅಧಿಕವಾದದ್ದನ್ನು ತರಲಿ.

ಕನ್ನಡ ಜನ ಈ 'ಲಿಯೊನಾರ್ಡ್ಡಾ' ಮೂಲಕ ಬ್ಯೋರ್ನ್‌ಸನ್ ಕವಿಯನ್ನು ಸಹೃದಯತೆಯಿಂದ ಬರಮಾಡಿಕೊಳ್ಳಲಿ.

೧೯-೯-೫೫ ಜಿ. ಪಿ. ರಾಜರತ್ನಂ
ಬೆಂಗಳೂರು ಕರ್ಣಾಟಕ ಸಂಘದ ಪರವಾಗಿ.

## ACKNOWLEDGMENTS

1. My thanks are due to Messrs. Thallaug and Moe, Lillehammer, Norway who are the legal executors of the copyright of Bjornstjerne Bjornson's literary works, for having permitted me to translate Bjornson's play, "LEONARDA" from the original Norwegian text into the Kannada language and also for giving me the rights to present it on the stage, the cinema or the radio. My thanks are also due to Messrs. J. M. Dent and Sons Ltd., Publishers, London, for having permitted the use of the English Translation of "LEONARDA" by R. Farquharson Sharp for this purpose (Everyman's Library No. 625).

2. I wish to express my gratitude to my friend Sri. G. P. Rajaratnam, M. A., of the Department of Kannada, University of Mysore, for the ever-ready and never-failing help he has so kindly given me in my literary endeavours in different ways. He has been good enough to scrutinise my translation of "LEONARDA" and prepare it for publication and also write a Foreword to it.

**S. G. SASTRY**

## ಸಮರ್ಪಣೆ

"ಸ್ವತಂತ್ರ ಕಾವ್ಯವನ್ನು ಬರೆಯಬಲ್ಲ ಮಹನೀಯರು ಎಲ್ಲಿಯೋ ಕೆಲವರು ;
ಮಿಕ್ಕವರಿಗೆ ಭಾಷಾಂತರವನ್ನು ಮಾಡಿ
ಉತ್ತಮ ಸಾಹಿತ್ಯವನ್ನು ತಮ್ಮ ದೇಶದಲ್ಲಿ ನಾಟ ಹಾಕುವದಕ್ಕಿಂತ
ಬೇರೆ ಘನವಾದ ಕಾರ್ಯ ಯಾವುದು ? "
ಎಂದು ಕಾರ್ಲ್ಲೈಲ್ ಹೇಳಿದ್ದನ್ನು ಮತ್ತೆ ಎತ್ತಿಹೇಳಿ
ಶ್ರೀ ಎಸ್. ಜಿ. ಶಾಸ್ತ್ರಿ ಅವರ ಇಬ್ಸನ್ ಅನುವಾದಗಳನ್ನು
ಕನ್ನಡಕ್ಕೆ ಸ್ವಾಗತಿಸಿ

"ಭಾಷಾಂತರ ಕೀಳು ಕೆಲಸವಲ್ಲ ;
ಸುಲಭವಾದ ಕೆಲಸವೂ ಅಲ್ಲ ;
ನಿರರ್ಥಕವಾದ ಕೆಲಸವೂ ಅಲ್ಲ ;
ಭಾಷಾಂತರಕ್ಕೆ ತಮ್ಮ ಬಾಳನ್ನು ಮುಡಿಪು ಕಟ್ಟಿದವರೂ
ಕೃತಾರ್ಥರಾದ 'ದಾಸರೇ' "
ಎಂಬ ಸಮ್ಮತಿಯ ಸೊಲ್ಲುಗಳನ್ನು ನುಡಿದು

ಶ್ರೀ ಎಸ್. ಜಿ. ಶಾಸ್ತ್ರಿ ಅವರ
ಕಡೆಗಾಣದ ಕೃತಜ್ಞತೆಗೆ ಪಾತ್ರರಾಗಿರುವ
ದಿವಂಗತ
**ರಾಜಸೇವಾಸಕ್ತ ಶ್ರೀ ಬಿ. ಎಂ. ಶ್ರೀಕಂಠಯ್ಯ**
ಅವರ ನೆನಪಿಗೆ
ಈ 'ಲಿಯೊನಾರ್ಡ್ಡಾ' ಭಾಷಾಂತರವನ್ನು
ಶ್ರೀ ಶಾಸ್ತ್ರಿಗಳವರ ಅಪೇಕ್ಷೆಯಂತೆ ಸಮರ್ಪಿಸಿದ್ದೇನೆ
— ರಾಜರತ್ನಂ —

# ಬ್ಯೋರ್ನ್‌ಸನ್

'ಲಿಯೊನಾರ್ಡ್ಡಾ' ನಾಟಕವನ್ನು ಬರೆದಾತನು ನಾರ್ವೆ ದೇಶದವನು. ಆತನ ಹೆಸರು Bjornstjerne Bjornson. ಈ ಅಕ್ಷರಸಂಯೋಜನೆಗೆ ಏನು ಉಚ್ಚಾರವಾಗುವುದೋ ನನಗೆ ತಿಳಿಯುವುದಾಗಿಲ್ಲ. ಕೊನೆಯ ಹೆಸರು 'ಬ್ಯೋರ್ನ್‌ಸನ್' ಆಗಬಹುದು ಎಂದುಕೊಂಡಿದ್ದೇನೆ. ಈತ ಹುಟ್ಟಿದ್ದು 1832 ರಲ್ಲಿ.

ಈತನಿಗೆ ಬಾಲ್ಯದಿಂದಲೂ ತಾನೊಬ್ಬ ದೊಡ್ಡ ಕವಿಯಾಗಬೇಕು ಎಂದು ಗೀಳು ಇದ್ದಿತಂತೆ. ಆದರೆ ವಯಸ್ಸು, ಅನುಭವ ಆದ ಹಾಗೆಲ್ಲ ತನ್ನ ಅಳತೆ ತನಗೆ ತಿಳಿಯಿತಂತೆ. ವಿದ್ಯಾರ್ಥಿದೆಸೆಯಲ್ಲಿದ್ದಾಗ ವಿಶ್ವವಿದ್ಯಾಲಯದ ಇತರ ವಿದ್ಯಾರ್ಥಿಗಳೊಡನೆ ಸೇರಿಕೊಂಡು ಕೆಲವು ಸಾಹಿತ್ಯ ಚಟುವಟಿಕೆಗಳನ್ನು ನಡೆಸುತ್ತಾ, ನಾಟಕ ವಿಮರ್ಶೆಯಲ್ಲಿ ಪರಿಣತನಾಗುತ್ತಿದ್ದನಂತೆ. ಆ ಕಾಲದಲ್ಲಿ ಈತ ಒಂದು ನಾಟಕವನ್ನು ಬರೆದು, ಅದನ್ನು ಆ ದೇಶದ ಪ್ರತಿಷ್ಠ ರಂಗಭೂಮಿಯವರು ಆಡಲು ಆಯ್ದುಕೊಂಡು ಒಂದು ಅಭೂತಪೂರ್ವವಾದ ಗೌರವ ದೊರಕಿದ ಹೊತ್ತಿನಲ್ಲಿ, ತನ್ನ ನಾಟಕವನ್ನು ತಾನೇ ವಿಮರ್ಶಿಸಿಕೊಂಡು, ಆಡಲು ಸಾಕಾಗುವ ಪಕ್ವತೆ ಅದರಲ್ಲಿ ಇಲ್ಲವೆಂದು ತನ್ನ ನಾಟಕವನ್ನು ತಾನೇ ಹಿಂದಕ್ಕೆ ತೆಗೆದುಕೊಂಡುಬಿಟ್ಟನಂತೆ! ಆಗ ಈತನಿಗೆ ಸುಮಾರು 20 ವಯಸ್ಸು.

ಇದಾದ ಒಂದು ಐದಾರು ವರ್ಷಗಳ ಮೇಲೆ ಬ್ಯೋರ್ನ್‌ಸನ್ ತನ್ನ ಜನಪದದ ಜನಜೀವನಕ್ಕೆ ಸಂಬಂಧಪಟ್ಟ ಕೆಲವು ಕಥಾನಕಗಳನ್ನು ಬರೆದ. ಅವು ನಾರ್ವೆ ದೇಶದ ಗುಣವಿಶಿಷ್ಟತೆಯನ್ನು ವ್ಯಕ್ತಪಡಿಸಿದವಾಗಿ, ಆತನ ದೇಶದಲ್ಲಿ ಆತನ ಬರಹ ಗಣ್ಯವಾಯಿತು. ಇತರ ದೇಶಗಳ ಗಮನವೂ ಆತನ ಕಡೆಗೆ ತಿರುಗಿತು. ಹಾಗಾಗಿ, ಈಗ ಈತನಿಗಿಂತ ಪ್ರಸಿದ್ಧನಾಗಿರುವ ಇಬ್ಸನ್ ಇಂಗ್ಲಿಷ್‌ಗೆ ಅನುವಾದವಾಗುವ ಮೊದಲೇ ಬ್ಯೋರ್ನ್‌ಸನ್ನಿನ ಕಥಾನಕಗಳು ಇಂಗ್ಲಿಷಿನಲ್ಲಿ ಮೈದೋರಿದವು. ಇದು ಆದದ್ದು ಸುಮಾರು 1858ರಲ್ಲಿ.

ಆದರೆ ನಾಟಕವನ್ನು ಬ್‌ಯೋರ್‌ನ್‌ಸನ್ ಕೈಬಿಟ್ಟಿರಲಿಲ್ಲ 1857 ರಿಂದ 1859, 1865-1867-ಈ ಕಾಲದಲ್ಲಿ ಆತ ಆ ದೇಶದ ದೊಡ್ಡ ರಂಗ ಭೂಮಿಯ ದಿಗ್ದರ್ಶಕನಾಗಿ ನಿಂತು ಕೆಲಸ ಮಾಡಿದನು. ಇಬ್ಸನ್ನಿನ ಹಾಗೆಯೇ ಈತನಾದರೂ ಮೊದಲುಮೊದಲು ತನ್ನ ನಾರ್ವೆ ದೇಶದ ಪೂರ್ವೇತಿಹಾಸದ ಮಹಾ ವೀರಪುರುಷರನ್ನು ಕುರಿತು ನಾಟಕಗಳನ್ನು ಬರೆದು ತನ್ನ ಜನರಲ್ಲಿ 'ತಾವು ನಾರ್ವೆಯವರು' ಎಂಬ ಅಭಿಮಾನವನ್ನು ಉದ್ಬೋಧಿಸಿದನು. ಅನಂತರ ಪುನಃ ಇಬ್ಸನ್ನಿನ ಹಾಗೆಯೇ, ಸಮಕಾಲೀನವಾದ ಸಾಮಾಜಿಕ ನಾಟಕಗಳನ್ನು ಬರೆದು, ಆಡಿಸಿ, ಜನಜಾಗೃತಿಗೂ ಸಮಾಜ ಸುಧಾರಣೆಗೂ ಕಾರಣನಾದನು.

ಬ್‌ಯೋರ್‌ನ್‌ಸನ್ ಬರೆದಿರುವ ಕವನಗಳೂ ಗೀತೆಗಳೂ ಆತನ ನಾಡಿನ ಜನರಿಗೆ ಪ್ರಿಯವಾಗಿವೆ. ಅವುಗಳಲ್ಲಿ ಎರಡು ಕವನಗಳಂತೂ ನಾರ್ವೆಯವರಿಗೆ ರಾಷ್ಟ್ರಗೀತೆಯಂತಾಗಿದ್ದುವು. ಒಂದು: 'Ja, Vi elskar dette Landet' (ಪ್ರಿಯವೈಸೆ ನಮಗೆ ನಮ್ಮದೀ ನಾಡು); ಇನ್ನೊಂದು: 'Fremad! Fremad!' (ಮುಂದೆ! ಮುಂದೆ!) ಇವುಗಳಲ್ಲಿ ಮೊದಲನೆಯದರ ಪ್ರಭಾವವನ್ನು ಪ್ರಕಟಪಡಿಸುವ ಒಂದು ಘಟನೆ ಒಮ್ಮೆ ನಡೆಯಿತು. ಬ್‌ಯೋರ್‌ನ್‌ಸನ್ ಸಾಹಿತ್ಯ ಚಟುವಟಿಕೆಗಳಲ್ಲಿ ಎಷ್ಟು ಆಸಕ್ತನಾಗಿದ್ದನೋ ನಾರ್ವೆ ದೇಶದ ರಾಜಕೀಯ ಚಟುವಟಿಕೆಗಳಲ್ಲಿಯೂ ಅಷ್ಟೇ ನಿರತನಾಗಿದ್ದ. ಒಮ್ಮೆ, ಆತನ ರಾಜಕೀಯದ ನಿಲುವನ್ನು ಒಪ್ಪದೆ ಪ್ರತಿಭಟಿಸುವುದಕ್ಕೆ ಹೊರಟ ಒಂದು ದೊಡ್ಡ ಗುಂಪು, ಆತನ ಮನೆಯ ಮೇಲೆ ಧಾಳಿ ನಡಸಿ, ಕಲ್ಲು ಹೊಡೆದು ಕಿಟಕಿಗಳನ್ನು ಒಡೆದುಹಾಕಿದರು. ಹೀಗೆ ತಮ್ಮ ಉದ್ರೇಕವನ್ನು ಹೊರಗೆಡವಿ ಕೃತಕೃತ್ಯರಾದೆವೆಂದುಕೊಂಡ ವಿಜಯೋತ್ಸವದ ಹೊತ್ತಿನಲ್ಲಿ ಆ ಗುಂಪಿಗೆ ದನಿಯೆತ್ತಿ ತಮ್ಮ ಸಂತೋಷವನ್ನು ಹಾಡಿಕೊಳ್ಳಬೇಕೆನ್ನಿಸಿತಂತೆ. ಆಗ ಅಲ್ಲಿದ್ದ ಸಾವಿರಾರು ಕಂಠಗಳಲ್ಲಿ ಒಮ್ಮಿಂದೊಮ್ಮೆಗೆ ಉಕ್ಕಿಬಂದ ಹಾಡೆಂದರೆ—ಬ್‌ಯೋರ್‌ನ್‌ಸನ್ ಬರೆದಿದ್ದ 'ಪ್ರಿಯವೈಸೆ ನಮಗೆ ನಮ್ಮದೀ ನಾಡು!' ಬ್‌ಯೋರ್‌ನ್‌ಸನ್ ಈ ಘಟನೆಯನ್ನು ತುಂಬ ಅಭಿಮಾನದಿಂದ, ಸಂತೃಪ್ತಿಯಿಂದ ಹೇಳಿಕೊಳ್ಳುತ್ತಿದ್ದನಂತೆ.

ಬ್‌ಯೋರ್‌ನ್‌ಸನ್ ಬರೆದ ನಾಟಕಗಳಲ್ಲಿ ಹೆಚ್ಚು ಪರಿಣಾಮವಾದವು

—ಆತನ 'ಸಾಮಾಜಿಕ ನಾಟಕ'ಗಳು. ಮೊದಲು ಬರೆದ ಐತಿಹಾಸಿಕ ನಾಟಕಗಳಲ್ಲಿ ಆತ ತನ್ನ ಉದ್ದೇಶವನ್ನು ಸ್ಪಷ್ಟವಾಗಿಯೆ ಹೇಳಿದ್ದ: "ನಮ್ಮ ಹಿಂದಿನ ಕಾಲದ ಇತಿಹಾಸದ ಚಿತ್ರಣದಿಂದ ಈಗಿನ ವರ್ತಮಾನಕಾಲದ ಮೇಲೆ ಬೆಳಕು ಬೀರುವುದು; ಮತ್ತು ವರ್ತಮಾನಕಾಲದ ಚಿತ್ರಣದಿಂದ ಹಿಂದಿನ ಕಾಲದ ಮೇಲೆ ಬೆಳಕು ಬೀರುವುದು." ಈ ಕಾರ್ಯವನ್ನು ತನ್ನ ಐತಿಹಾಸಿಕ ನಾಟಕಗಳಲ್ಲೂ ಜನಪದ ಕಥಾನಕಗಳಲ್ಲೂ ಕೈಗೊಂಡು ಜೊತೆಜೊತೆಯಲ್ಲೆ ನಡಸಿ, ನಾರ್ವೆಯವರಲ್ಲಿ ಒಂದು ಅಪೂರ್ವವಾದ ರಾಷ್ಟ್ರಾಭಿಮಾನವನ್ನು ಜಾಗೃತಿಗೊಳಿಸಿದನು. ಅನಂತರ ಸೃಷ್ಟಿಮಾಡಿದ ಸಾಮಾಜಿಕ ನಾಟಕಗಳಲ್ಲಿಯಾದರೋ ತನ್ನ ದೇಶದ ಜನಜೀವನದ ಸುಖದುಃಖಗಳನ್ನು ಚಿತ್ರಿಸಿ, ಆ ಜೀವನದ ಸಮಸ್ಯೆಗಳನ್ನು ಎತ್ತಿತೋರಿಸಿದ್ದು ಮಾತ್ರವಲ್ಲದೆ ಅವಕ್ಕೆ ಪರಿಹಾರಗಳನ್ನೂ ಸೂಚಿಸಿ, ಇಬ್ಸನ್ನಿನಂತೆಯೇ ಈತನೂ ಜನಪ್ರಿಯನಾದನು. ನಾರ್ವೆ ದೇಶದ ಜನಜೀವನದ ಮೇಲಿದ್ದ ಮುಸುಕು ತೆಗೆದು, ತನ್ನ ಜನರಿಗೆ ತನ್ನ ದೇಶವನ್ನು ಕಾಣಿಸಿದವನು ಈತ. ನಿತ್ಯಜೀವನದ ಸಾಮಾನ್ಯ ಘಟನೆಗಳಲ್ಲಿ ರಸಸ್ಥಾನಗಳನ್ನು ಕಂಡು, ಕಾಣಿಸಿದವನು ಈತ.

ಹೀಗೆ ತನ್ನ ಕಥಾನಕಗಳು, ಕಾದಂಬರಿಗಳು, ಕವನಗಳು, ನಾಟಕಗಳು ಇವುಗಳ ಮೂಲಕ ಜನರ ಪ್ರೀತಿವಿಶ್ವಾಸಗಳಿಗೆ ಪಾತ್ರನಾದ ಬ್ಯೋರ್ನ್‌ಸನ್ ಬರುತ್ತ ಬರುತ್ತ ಸಮಾಜಸುಧಾರಣೆಯಲ್ಲಿಯೂ ಜನಜೀವನದಲ್ಲಿ ಧಾರ್ಮಿಕ ವಿಷಯಗಳಿಗಿರುವ ಸ್ಥಾನವನ್ನು ಕುರಿತೂ ಆಸಕ್ತಿ ವಹಿಸಿಕೊಳ್ಳತೊಡಗಿದನು. ಇವು ಬದುಕಿಗೆ ಬೇಕಾದ ಸಂಗತಿಗಳಾದರೂ ವಾದಕ್ಕೆ ತುಂಬ ಆಸ್ಪದವಿದ್ದ ಪ್ರಶ್ನೆಗಳಾಗಿದ್ದುದರಿಂದ, ಬ್ಯೋರ್ನ್‌ಸನ್ ತನ್ನ ನಿಶ್ಚಿತಾಭಿಪ್ರಾಯಗಳನ್ನು ಯಾರ ದಾಕ್ಷಿಣ್ಯಕ್ಕೂ ಒಳಗಾಗದೆ ಮಂಡಿಸಿ ಮುಂದುವರಿಸುವ ಶಠಪ್ರಕೃತಿಯವನಾದ್ದರಿಂದ, ಸ್ವಲ್ಪ ಕಾಲ ತನ್ನ ದೇಶದವರ ಪ್ರತಿಭಟನೆಯನ್ನು ಎದುರಿಸಬೇಕಾಯಿತು. ಎರಡು ಮೂರು ವರ್ಷ ಕಾಲ ನಾರ್ವೆಯನ್ನೇ ತೊರೆದು ಹೋಗಬೇಕಾಗಿ ಬಂತು. ಇದರಿಂದಾಗಿ ಅವನ ಜನಪ್ರಿಯತೆಗೆ ಕೆಲವು ಕಾಲ ಮೋಡ ಮುಸುಕಿಕೊಂಡಿತು. ನಾರ್ವೆಗೆ ಹಿಂದಿರುಗಿದಾಗ, ಒಂದು ಹೊಸ ನಾಟಕವನ್ನು ಬರೆದು ಆಡಬೇಕೆಂದಾಗ, ಅದನ್ನು ಆಡಿಸುವುದು ಅತ್ಯಂತ ಶ್ರಮಸಾಧ್ಯವಾಯಿತು. ಆದರೆ ಜನರ

ಮನಸ್ಸು ಎಂಬುದೊಂದು ಗಾಳಿಹುಂಜ-ಯಾವ ಹೊತ್ತಿನಲ್ಲಿ ಗಾಳಿ ಹೇಗೆ ಬೀಸಿದರೆ ತಾನು ಹಾಗೆ ತಿರುಗುತ್ತದೆ. ಸ್ವಲ್ಪ ಕಾಲದ ಬಳಿಕ, ಆತ ರಾಷ್ಟ್ರ ವೀರನೆಂದು ಅನೇಕರಿಗೆ ಅನ್ನಿಸಿತು, ತಾತ್ಕಾಲಿಕವಾಗಿ ಕಳೆದುಹೋಗಿದ್ದ ಆತನ ಖ್ಯಾತಿ ಮತ್ತೆ ಕೂಡಿಕೊಂಡು ಬಂತು.

ಇದಾದ ಮೇಲೆ (1883) ಆತನ ಉಳಿದ ಆಯುಷ್ಯವೆಲ್ಲಾ ಬಹುವಾಗಿ ಸಾಹಿತ್ಯಸೃಷ್ಟಿಗೇ ಮೀಸಲಾಯಿತು. ಮೇಲೆ ಹೇಳಿದ ಕಥೆ, ಕಾದಂಬರಿ, ಕವನ, ನಾಟಕ ಇವುಗಳಲ್ಲದೆ ಬ್ಯೋರ್ನ್‌ಸನ್ ಬರೆದಿರುವ ಕಾಗದ ಪತ್ರಗಳು, ಲೇಖನಗಳು, ಭಾಷಣಗಳು, ಕಿರುಹೊತ್ತಗೆಗಳು, ಮುನ್ನುಡಿ ಗಳು, ಅನೇಕ ಮಾಸಿಕ ತ್ರೈಮಾಸಿಕಾದಿಗಳಲ್ಲಿ ಬಂದ ಆತನ ಬರಹಗಳು— ಅದೊಂದು ಸಾಹಿತ್ಯ ಅಪಾರವಾಗಿದೆ. ಇದಲ್ಲದೆ, ಈ ಕವಿ ಮತ್ತು ಈತನ ಕೃತಿಗಳನ್ನು ಕುರಿತು ವಿಚಾರ ಗ್ರಂಥಗಳು ಅವೂ ಸಮೃದ್ಧವಾಗಿವೆ.

ಬ್ಯೋರ್ನ್‌ಸನ್ನಿನ ಸಾಹಿತ್ಯಶಕ್ತಿ ಆತನ ದೇಶದ ಎಲ್ಲೆಗಳನ್ನೂ ಮೀರಿಹೋಗಿ, ಯೂರೋಪಿನ ಸಾಹಿತ್ಯರಸಿಕರ ಕಿವಿಮನಸ್ಸುಗಳನ್ನು ಗೆದ್ದು ಕೊಂಡು, ಅದರ ಪರಿಣಾಮವಾಗಿ ಆತನಿಗೆ 1903 ರಲ್ಲಿ ಸಾಹಿತ್ಯಕ್ಕೋಸ್ಕರ ಮೀಸಲಾದ 'ನೋಬೆಲ್ ಪಾರಿತೋಷಿಕ' ಲಭಿಸಿತು.

ಬ್ಯೋರ್ನ್‌ಸನ್ ತನ್ನ ಕಡೆಯ ಕಾಲವನ್ನು ಪ್ಯಾರಿಸ್ ನಗರದಲ್ಲಿ ಕಳೆದು, 1910 ರಲ್ಲಿ ಮರಣ ಹೊಂದಿದನು. ನಾರ್ವೆ ಆತನ ಕಳೇಬರವನ್ನು ಸಕಲ ರಾಷ್ಟ್ರಮರ್ಯಾದೆಗಳಿಂದ ತನ್ನ ದೇಶಕ್ಕೆ ತರಿಸಿಕೊಂಡು, ಆತನನ್ನು ತನ್ನಲ್ಲಿ ಸಮಾಧಿಮಾಡಿಕೊಂಡಿತು.

ನಮ್ಮಲ್ಲಿ ಪಂಪ, ನಾಗವರ್ಮ, ಜನ್ನ ಮೊದಲಾದವರು ಶಾರದೆಯ ಸೇವೆಯನ್ನು ಮಾಡಿದುದರ ಜೊತೆಯಲ್ಲಿಯೇ ತಮ್ಮ ರಾಜ್ಯಕ್ಕೂ ತಮ್ಮ ಮೈಮನಸುಗಳನ್ನು ಮುಡಿಪು ಇಟ್ಟ ಹಾಗೆ—ಬ್ಯೋರ್ನ್‌ಸನ್ ತನ್ನ ನಾರ್ವೆಗೆ ತಾನು ದುಡಿದ. ಈ ಹೊತ್ತೂ ನಾರ್ವೆಯವರು ಆತನ ಸಾಹಿತ್ಯ ರಚನೆಗಳಿಗೆ ಎಷ್ಟು ಮನ್ನಣೆ ಕೊಡುತ್ತಾರೋ ಆತನು ಮಾಡಿದ ರಾಷ್ಟ್ರ ಸೇವೆಗೂ ಅಷ್ಟೇ ಮನ್ನಣೆ ಕೊಡುತ್ತಾರೆ. ಸುಮಾರು ಐವತ್ತು ವರ್ಷಗಳಿಗೆ ಮೇಲ್ಪಟ್ಟು ಆತನು ನಾರ್ವೆಯ ರಾಷ್ಟ್ರಜೀವನದ ನೇತಾರನಾಗಿ ನಿಂತು ಕೆಲಸ ಮಾಡಿದನು. ಕೇವಲ ತನ್ನ ನಾಟಕವಾಯಿತು, ತಾನಾಯಿತು ಎಂದು

ತನ್ನ ಚಿಪ್ಪಿನೊಳಗೆ ತಾನು ಮುದುರಿಕೊಂಡವನಲ್ಲ. ಬ್ಯೋರ್ನ್‌ಸನ್ ಹೆಮ್ಮೆಯಿಂದ—

"To be where I was needed most
Was more to me than nearly all
Of what my pen produced"

ಎಂದು ಹೇಳಿಕೊಳ್ಳುತ್ತಿದ್ದನಂತೆ. ನಾರ್ವೆ ಜನರ ಪರವಾಗಿ, ಅವರ ಕೊರಳಾಗಿ, ಅವರನ್ನು ಸೌಭಾಗ್ಯದ ದಿಕ್ಕಿಗೆ ನಡಸುತ್ತ, ಅವರ ಸುಖದುಃಖಗಳನ್ನು ತನ್ನ ಸುಖದುಃಖಗಳನ್ನಾಗಿ ಮಾಡಿಕೊಂಡು ಬದುಕಿದವನು ಬ್ಯೋರ್ನ್‌ಸನ್. ಒಮ್ಮೆ ತನ್ನ ಸ್ನೇಹಿತನಿಗೆ ಹೇಳಿದನಂತೆ—"ನಾನು ನಾರ್ವೆಯಲ್ಲಿ ಬದುಕುತ್ತೇನೆ. ನಾರ್ವೆಯನ್ನು ಚಮ್ಮಟಿಕೆಯಿಂದ ಬಾರಿಸುತ್ತೇನೆ, ನಾರ್ವೆಯಲ್ಲಿ ಚಮ್ಮಟಿಕೆಯಿಂದ ಏಟು ತಿನ್ನುತ್ತೇನೆ. ನಾರ್ವೆಯಲ್ಲಿ ಹಾಡಿ, ನಾರ್ವೆಯಲ್ಲೆ ಸಾಯುತ್ತೇನೆ. ಇದು ಖಂಡಿತ, ಶತ ಖಂಡಿತ." ನಾರ್ವೆಯ ಸಂಸ್ಕೃತಿ ಡೆನ್‌ಮಾರ್ಕಿನ ಸಂಸ್ಕೃತಿಯಲ್ಲಿ ಮುಳುಗಿಹೋಗದ ಹಾಗೆ, ನಾರ್ವೆಯ ಸ್ವಾತಂತ್ರ್ಯ ಸ್ವೀಡನ್ನಿನ ಸ್ವಾತಂತ್ರ್ಯದಡಿ ಸಿಕ್ಕಿಹೋಗದ ಹಾಗೆ, ನಾರ್ವೆಯ ಪರಂಪರಾಗತವಾದ ಸ್ವಂತ ಸಹಜ ಸಲ್ಲಕ್ಷಣಗಳು ಪೂರ್ಣವಾಗಿ ವಿಕಾಸಗೊಂಡು, ನಾರ್ವೆ ನಾರ್ವೆಯಾಗಿ ತಲೆಯೆತ್ತಿ ಲೋಕದಲ್ಲಿ ಮೆರೆಯುವಂತೆ ಮಾಡಿದ ಮಹಾಪುರುಷರಲ್ಲಿ ಬ್ಯೋರ್ನ್‌ಸನ್ ಆತನೂ ಒಬ್ಬ ಅಗ್ರಿಮನು. ನಾರ್ವೆ ದೇಶಕ್ಕೆ ಒಂದು ರಾಷ್ಟ್ರಗೀತೆ, ನಾರ್ವೆ ದೇಶಕ್ಕೆ ಒಂದು ರಾಷ್ಟ್ರಧ್ವಜ, ನಾರ್ವೆ ದೇಶಕ್ಕೆ ಒಂದು ರಾಷ್ಟ್ರಭಾಷೆ, ನಾರ್ವೆ ದೇಶಕ್ಕೆ ಒಂದು ರಾಷ್ಟ್ರೀಯೋತ್ಸವದ ರಜಾದಿವಸ ಇವು ಸಂಪ್ರಾಪ್ತವಾಗುವಲ್ಲಿ ಬ್ಯೋರ್ನ್‌ಸನ್ ವಹಿಸಿದ ಪಾತ್ರ ಬಹಳ ಪ್ರಮುಖವಾದದ್ದು. ಆದ್ದರಿಂದಲೇ ಆ ದೇಶವನ್ನೂ ಆ ಕವಿಯನ್ನೂ ಬಲ್ಲವರಿಗೆ ಆತನನ್ನು ಎಷ್ಟು ಕೊಂಡಾಡಿದರೂ ಸಾಲದು.

"ಬ್ಯೋರ್ನ್‌ಸನ್ ಮುಖ ಆತನ ದೇಶದ ಹಾಗೆಯೇ ದೊಡ್ಡದಾದದ್ದು. ಮೇಲು ನೋಟಕ್ಕೆ ಒರಟಾದದ್ದು, ಒಳಗೆ ದಯೆಯಿಂದ ತುಂಬಿದ್ದು" ಎಂದಿದ್ದಾರೆ. ದಯಾರ್ದ್ರವಾದ ಹೃದಯವಿದ್ದದ್ದರಿಂದಲೇ ಆತ ತನ್ನ ದೇಶದವರಿಗೆ ಅಷ್ಟು ಪ್ರಿಯನಾದದ್ದು. ಎಲ್ಲಿ ಯಾವ ಅನ್ಯಾಯ, ಎಲ್ಲಿ ಯಾವ

ಪೀಡನೆ ಎಂದರೆ ಅಲ್ಲಿ ಅದರೆದುರು ನಿಂತು ಹೊಡೆದಾಡಲು ಆತ ಸರ್ವದಾ ಸಿದ್ಧನಾಗಿರುತ್ತಿದ್ದ. ಆತನ ಔದಾರ್ಯ—ಕೆಲವು ವೇಳೆ ಪಾತ್ರಾಪಾತ್ರ ವಿವೇಚನೆಯಿಲ್ಲದ್ದಾದರೂ—ದೀರ್ಘಬಾಹುವಾಗಿದ್ದಿತು. ಆತನ ನಡವಳಿಕೆಯನ್ನು ನಿಶ್ಚಯಿಸುತ್ತಿದ್ದುದು—ಆತನ ಮಿದುಳಿಗಿಂತಲೂ ಆತನ ಹೃದಯ.

"ಬ್ಯೋರ್ನ್‌ಸನ್ ಕಾದಂಬರಿಕಾರನಾಗಿ, ನಾಟಕಕರ್ತನಾಗಿ, ವಿಮರ್ಶಕನಾಗಿ, ರಾಜಕಾರಣಿಯಾಗಿ, ವಾದಿಯಾಗಿ, ವಾಗ್ಮಿಯಾಗಿ, ಶಾಂತಿ ಪ್ರವರ್ತಕನಾಗಿ—ಏನು ಮಾಡಿದರೂ ಅದರಲ್ಲಿ ಒಂದು ಸಮೃದ್ಧಿ ತುಂಬಿರುತ್ತಿತ್ತು, ಅದು ಭರ್ಜರಿಯಾಗಿರುತ್ತಿತ್ತು'' ಎಂದಿದ್ದಾರೆ.

"ವಾಲ್ಟೇರ್ ಹೇಗೆ ಫ್ರಾನ್ಸ್ ರಾಷ್ಟ್ರದ ಪ್ರತ್ಯಕ್ಷಮೂರ್ತಿಯಾಗಿದ್ದನೋ, ಷಿಲ್ಲರ್ ಹೇಗೆ ಜರ್ಮನಿ ರಾಷ್ಟ್ರದ ಪ್ರತ್ಯಕ್ಷಮೂರ್ತಿಯಾಗಿದ್ದನೋ ಹಾಗೆ ಬ್ಯೋರ್ನ್‌ಸನ್ ನಾರ್ವೆ ರಾಷ್ಟ್ರದ ಪ್ರತ್ಯಕ್ಷಮೂರ್ತಿಯಾಗಿದ್ದನು'' ಎಂದಿದ್ದಾರೆ.

"ನಾರ್ವೆಯ ರಾಷ್ಟ್ರಚೈತನ್ಯದ ಮಹಾಪೂಜಾರಿ ಈತ" ಎಂದಿದ್ದಾರೆ.

"ಬ್ಯೋರ್ನ್‌ಸನ್ ಎಂಬ ಹೆಸರನ್ನು ಹೇಳುವುದೂ ಒಂದೇ, ನಾರ್ವೆಯ ರಾಷ್ಟ್ರಧ್ವಜವನ್ನು ನಭಕ್ಕೆ ಏರಿಸುವುದೂ ಒಂದೇ" ಎಂದಿದ್ದಾರೆ.

"ನಾರ್ವೆರಾಷ್ಟ್ರದ ಪೂರ್ಣ ಪ್ರತಿಭೆ, ಅದರ ಗುಣಾವಗುಣಗಳು, ಅದರ ಇತಿಮಿತಿಗಳು ಎಲ್ಲವೂ ಈತನಲ್ಲಿ ರೂಪುಗೊಂಡಿದ್ದುವು. ಆತ ಮಾತನಾಡಲು ಬಾಯಿ ತೆರೆದರೆ, ಇಡಿಯ ನಾರ್ವೆರಾಷ್ಟ್ರವೇ ತಾನು ಮಾತನಾಡಿದ ಹಾಗೆ" ಎಂದಿದ್ದಾರೆ.

ಬ್ಯೋರ್ನ್‌ಸನ್ ಇಬ್ಸನ್ನಿಗಿಂತ ನಾಲ್ಕು ವರ್ಷ ಚಿಕ್ಕವನು. ಸಮಕಾಲೀನರಾದ ಇವರಿಗೆ ಸಮಾನವಾದ ಧ್ಯೇಯಗಳು ಇದ್ದದ್ದರಿಂದ ಅವರ ಮೈತ್ರಿ ಅನ್ಯೋನ್ಯವಾಗಿತ್ತು. ಆದರೆ ಮಧ್ಯೆ ಒಮ್ಮೆ, ಇಬ್ಸನ್ ತನ್ನ The league of Youth ಎಂಬ ನಾಟಕದಲ್ಲಿ ತನ್ನನ್ನು ಹೀಯಾಳಿಸಿದನೆಂದು ಬ್ಯೋರ್ನ್‌ಸನ್ ಭ್ರಮಿಸಿಕೊಂಡು, ಇಬ್ಬರಿಗೂ ಸ್ವಲ್ಪಕಾಲ ವೈಮನಸ್ಯ ಬಂದಿತ್ತು. ಕೆಲವು ವರ್ಷಗಳಾದ ಮೇಲೆ, ಇಬ್ಸನ್ನಿನ Ghosts ಎಂಬ ನಾಟಕ ಪ್ರಕಟವಾಗಿ, ಅದರ ವಿಷಯದಲ್ಲಿ ತೀವ್ರವಾದ ವಾದವಿವಾದಗಳೆದ್ದಾಗ, ಬ್ಯೋರ್ನ್‌ಸನ್ ಇಬ್ಸನ್ನಿನ ಪರವಾಗಿ ತಾನು ವಾದಮಾಡಿದ.

ಮುರಿದುಹೋಗಿದ್ದ ಮೈತ್ರಿ ಮತ್ತೆ ಬೆಸೆಯಿತು. ಮುಂದೆ ಇಬ್ಸನ್ನಿನ ಮಗನಿಗೆ ಬ್ಯೋರ್ನ್‌ಸನ್ನಿನ ಮಗಳನ್ನು ಕೊಟ್ಟು ಮದುವೆಯಾಗಿ, ಬಾಂಧವ್ಯ ಬೆಳೆಯಿತು. ನಾರ್ವೆಯ ಸಾಹಿತ್ಯಪ್ರಪಂಚದಲ್ಲಿ ಇಬ್ಸನ್ ಮೊದಲು, ಆತನ ಅನಂತರದ ಹೆಸರೆಂದರೆ – ಬ್ಯೋರ್ನ್‌ಸನ್.

ಬ್ಯೋರ್ನ್‌ಸನ್ನಿನ ನಾಟಕಗಳನ್ನು ಕುರಿತು ಒಂದು ತೀವ್ರವಾದ ಟೀಕೆಯುಂಟು. ಏನೆಂದರೆ—ಒಂದು ಉದ್ದೇಶವನ್ನು ಗುರಿಮಾಡಿಕೊಂಡು ಬರೆದಿರುವುದೇ ಈ ನಾಟಕಗಳಲ್ಲಿ ಒಂದು ಕೊರತೆ. ಇದು ವಾದಗ್ರಸ್ತವಾದ ಅಭಿಪ್ರಾಯ. ಉದ್ದೇಶವಿದ್ದುದರಿಂದಲೇ ಆ ನಾಟಕಗಳಿಗೆ ಒಂದು ಪವಿತ್ರತೆ ಬಂದಿದೆ ಎಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಏಕೆಂದರೆ—ಆ ಉದ್ದೇಶವು ರಾಷ್ಟ್ರದ ಹಿತಕ್ಕಾಗಿಯಿದ್ದು ಉದಾತ್ತವಾದದ್ದು; ಸಮಾಜದ ಹಿತಕ್ಕೋಸ್ಕರ ಆ ಉದ್ದೇಶ ಕಂಕಣ ಕಟ್ಟಿದ್ದ ಕಾರಣ ರಾಷ್ಟ್ರಹಿತವೆಂಬುದಕ್ಕಿಂತ ಇನ್ನೂ ಹೆಚ್ಚು ಬೆಲೆಯುಳ್ಳದ್ದು. ಆದ್ದರಿಂದ ಈತನ ನಾಟಕಗಳಿಗೆ ಬೆಲೆಕಟ್ಟುವಾಗ, ಅವು ಯಾವ ಸಮಯಸನ್ನಿವೇಶಗಳಲ್ಲಿ ರಚನೆಯಾದುವು ಎಂಬುದನ್ನು ಕೊಂಚಮಟ್ಟಿಗಾದರೂ ಮರೆಯದಿರಬೇಕು. ವಿಮರ್ಶೆಯಲ್ಲಿ ಇಂತಹ ಗೊಡವೆಗಳು ಯಾವುವೂ ತಲೆದೋರಬಾರದು ಎನ್ನುವ "ಶುದ್ಧ ವಿಮರ್ಶನ"ಕಾರರು ಇದನ್ನೇ ದೋಷವೆಂದು ಖಂಡಿಸಿದರೂ ಖಂಡಿಸಬಹುದು.

ಯಾರು ಏನೇ ಹೇಳಲಿ, ನಾರ್ವೆಗೆ ಬೆಳಕು ಬೀರಿದವರಲ್ಲಿ, ನಾರ್ವೆಗೆ ಸ್ವಾತಂತ್ರ್ಯ ಸಾಧಿಸಿಕೊಟ್ಟವರಲ್ಲಿ ಬ್ಯೋರ್ನ್‌ಸನ್ ಕೂಡ ಒಬ್ಬ ಗಣ್ಯನಾದ ಪ್ರಮುಖ ಎಂಬ ಬಗ್ಗೆ ಯಾರೂ ಎದುರು ಹೇಳುವಂತಿಲ್ಲ.

**ಮುಂದೆ ಓದಬಹುದಾದ ಪುಸ್ತಕಗಳು :—**

H. H. Boyesen—Essays on Scandinavian Literature.
W. M. Payne—Life of Bjornson.
G. Brandes—Critical studies of Ibsen and Bjornson.
Harold Larson—Bjornstjerne Bjornson.

## ಇಂಗ್ಲಿಷಿಗೆ ಅನುವಾದವಾಗಿರುವ
## ಬ್ಯೋರ್ನ್‌ಸನ್ನಿನ ಸಾಮಾಜಿಕ ನಾಟಕಗಳು

The Newly-Married Couple, 1865.
The Editor, 1874.
A Bankruptcy, 1874.
The King, 1877.
Leonarda, 1879.
The New System, 1879.
A Gauntlet, 1883.
Beyond our Strength, 1883-1885.
Geography and Love, 1885.
When the Vineyards are in Blossom, 1909.

# ಲಿಯೊನಾರ್ಡೊ

## ನಾಲ್ಕು ಅಂಕಗಳ ನಾಟಕ

## ಪಾತ್ರಗಳು

ಬಿಷಪ್ (The Bishop)
ಕಾರ್ನೀಲಿಯಾ (Cornelia), ಆತನ ಸೋದರಿ.
ಹಾಗ್‌ಬಾರ್ಟ್ (Hagbart), ಆತನ ಸೋದರಳಿಯ.
ಅಜ್ಜಿ (The Grand-mother)
ಲಿಯೊನಾರ್ಡಾ ಫಾಲ್ಕ್ (Leonarda Falk)
ಆಗಟ್ (Aagot), ಆಕೆಯ ಸೋದರಸೊಸೆ.
ಜನರಲ್ ರೋಸೆನ್ (General Rosen)
ಶ್ರೇಷ್ಠ ನ್ಯಾಯಾಧಿಪತಿ ರೋಸ್ಟ್ (Chief Justice Röst)
ಮಿಸೆಸ್ ರೋಸ್ಟ್ (Mrs. Rost)
ಪೆಡೆರ್‌ಸನ್ (Pedersen), ಲಿಯೊನಾರ್ಡಾ ಫಾಲ್ಕನ ಏಜೆಂಟ್.
ಹ್ಯಾನ್ಸ್ (Hans)
ಒಬ್ಬ ಹೆಣ್ಣಾಳು (A Maid)

# ಲಿಯೊನಾರ್ಡ್ವಾ

## ಒಂದನೆಯ ಅಂಕ

[ದೃಶ್ಯ—ಲಿಯೊನಾರ್ಡ್ವಾ ಫಾಲ್ಕಿನ ಮನೆಯ ಒಂದು ದೊಡ್ಡ ಕೊಠಡಿ. ಹಿಂಭಾಗ ದಲ್ಲಿ ಮಡಿಚುವ ಬಾಗಿಲುಗಳು ತೆರೆದು ನಿಂತಿವೆ. ಹಳೆಯ ಕಾಲದ ಮೇಜು ಕುರ್ಚಿ ಇತ್ಯಾದಿ. ಲಿಯೊನಾರ್ಡ್ವಾ, ಕುದುರೆ ಸವಾರಿಗೆ ತಕ್ಕ ಪೋಷಾಕು ಧರಿಸಿ, ಎಡಪಾರ್ಶ್ವಕ್ಕಿರುವ ಬರೆಯುವ ಮೇಜಿನ ಬಳಿ ನಿಂತು, ತನ್ನ ಏಜೆಂಟ್ ಆದ ಪೆಡೆರ್‌ಸನ್‌ನ ಸಂಗಡ ಮಾತನಾಡುತ್ತಿದ್ದಾಳೆ.]

**ಲಿಯೊನಾರ್ಡ್ವಾ :** ಪೂರ್ತಿ ನಷ್ಟ.

**ಪೆಡೆರ್‌ಸನ್ :** ಆದರೆ, ಮಿಸೆಸ್ ಫಾಲ್ಕ್—

**ಲಿಯೊನಾರ್ಡ್ವಾ :** ನಷ್ಟ, ಅದರ ಪ್ರತಿಯೊಂದು ಚೂರೂ. ಸುಟ್ಟು ಹೋದ ಇಟ್ಟಿಗೆಗಳನ್ನು ನಾನು ಮಾರಲಾರೆ. ಎಷ್ಟಿದೆ ಅದು? ಎರಡು ಇಟ್ಟಿಗೆಗೂಡು ಪೂರಾ—ಎಂದರೆ 24,000 ಇಟ್ಟಿಗೆ—ಈಗಿನ ಖರೀದಿಯಂತೆ ಸುಮಾರು ಮೂವತ್ತು ಪೌಂಡುಗಳ ಬೆಲೆ. ನಿನ್ನನ್ನು ಕಟ್ಟಿಕೊಂಡು ಏನುಮಾಡಲಿ?—ಮನೆಗೆ ಕಳಿಸಿಬಿಡಲೋ?

**ಪೆಡೆರ್‌ಸನ್ :** ತಾಯಿ, ಇದೆ ಮೊದಲು ಬಾರಿ—

**ಲಿಯೊನಾರ್ಡ್ವಾ :** ಅಲ್ಲ, ಖಂಡಿತ ಅಲ್ಲ; ಎಂದರೆ, ಇಟ್ಟಿಗೆಗಳು ಸುಟ್ಟುಹೋದದ್ದು ಇದೆ ಮೊದಲುಸಲ ಹೌದು, ಆದರೆ ನಿನ್ನ ಲೆಕ್ಕಾಚಾರಗಳು ಮಾತ್ರ ಮತ್ತೆ ಮತ್ತೆ ತಪ್ಪಾಗಿರುತ್ತವೆ. ಅದರಿಂದ ನಮ್ಮ ಗಿರಾಕಿಗಳಿಗೆ ತಪ್ಪು ತಪ್ಪು ಬಾಕಿಪಟ್ಟಿ ಕಳಿಸಿರುವುದಾಗಿದೆ. ನಿನಗೆ ಏನು ಬಂದಿದೆ?

**ಪೆಡೆರ್‌ಸನ್ :** ನಿಮ್ಮ ದಮ್ಮಯ್ಯ, ತಾಯಿ.

(ಹ್ಯಾನ್ಸ್ ಪ್ರವೇಶಿಸುವನು.)

**ಹ್ಯಾನ್ಸ್ :** ಕುದುರೆಗೆ ಜೀನುಹಾಕಿ ಸಿದ್ಧವಾಗಿದೆ, ತಾಯಿ. ಮತ್ತೆ, ಸಾಲುಮರಗಳ ಮಾರ್ಗದಲ್ಲಿ ಜನರಲ್ ಬರುತ್ತಿದಾರೆ.

**ಲಿಯೊನಾರ್ಡ :** ಒಳ್ಳೆಯದು. (ಹ್ಯಾನ್ಸ್ ಹೊರಗೆ ಹೋಗುವನು.) ಕುಡಿಯುವುದಕ್ಕೇನಾದರೂ ತೊಡಗಿದ್ದೀಯೊ, ಪೆಡೆರ್‌ಸನ್ ?

**ಪೆಡೆರ್‌ಸನ್ :** ಇಲ್ಲ, ತಾಯಿ.

**ಲಿಯೊನಾರ್ಡ :** ನೀನು ಅಂಥವನಲ್ಲ. ಆದರೆ ಏನು ಕಾರಣ? ತುಂಬ ಬದಲಾಯಿಸಿಹೋಗಿದ್ದಿಯೆ. – ಪೆಡೆರ್‌ಸನ್! ನನಗೆ ಗೊತ್ತು ಎಂದು ಕೊಂಡಿದ್ದೇನೆ! ನದಿಯ ಆಚೆ ಇರುವ ವನಾಂತರದ ಲತಾಗೃಹದಿಂದ ನೀನು ದೋಣಿಯಲ್ಲಿ ದಾಟಿಬರುತ್ತಿದ್ದುದನ್ನು ನೆನ್ನೆ ರಾತ್ರೆ ನೋಡಿದೆ. ಪ್ರೇಮ ಪಾಶದಲ್ಲಿ ಸಿಕ್ಕಿದ್ದೀಯೋ? (ಪೆಡೆರ್‌ಸನ್ ಮುಖ ಆಚೆ ಮಾಡುವನು.) ಅದೋ ಸಂದರ್ಭ! ಏನಾದರೂ ಪ್ರೇಮಭಂಗವಾಯಿತೇನು ? (ಅವನ ಹತ್ತಿರ ಹೋಗಿ, ಅವನ ಭುಜದ ಮೇಲೆ ತನ್ನ ಕೈಹಾಕಿ, ಅವನಂತೆಯೇ ಪ್ರೇಕ್ಷಕರ ಕಡೆಗೆ ತಾನೂ ಬೆನ್ನು ಮಾಡಿ ನಿಲ್ಲುವಳು.) ಅವಳೊಡನೆ ಮದುವೆ ನಿಶ್ಚಿತವಾಗಿದೆಯೇನು?

**ಪೆಡೆರ್‌ಸನ್ :** ಹೌದು.

**ಲಿಯೊನಾರ್ಡ :** ಹಾಗಾದರೆ, ಅವಳು ನಿನ್ನನ್ನು ಚೆನ್ನಾಗಿ ಕಾಣುತ್ತಿಲ್ಲ? ನಿನಗೆ ಮೋಸಮಾಡುತ್ತಿಲ್ಲವಷ್ಟೆ ? (ಬಗ್ಗಿ, ಅವನ ಮುಖವನ್ನು ಗಮನಿಸುವಳು.) ಆದರೂ, ನಿನಗೆ ಅವಳಲ್ಲಿ ಪ್ರೇಮವುಂಟೇನು ? (ಅವನಿಂದ ದೂರ ಸರಿಯುವಳು.) ಹಾಗಾದರೆ, ನಿನಗೆ ಬಲ ಸಾಲದು, ಪೆಡೆರ್‌ಸನ್. ಯಾರು ನಮಗೆ ವಂಚನೆ ಮಾಡುವರೋ ಅವರನ್ನು ಪ್ರೀತಿಸುವುದು ಬಹುಶಃ ಸಾಧ್ಯವಾಗಲಾರದು. (ತನ್ನ ಕೈಚೀಲಗಳಲ್ಲಿ ಒಂದನ್ನು ಧರಿಸುವಳು.) ಸ್ವಲ್ಪಕಾಲ ಭಯಂಕರವಾಗಿ ನರಳಬೇಕಾಗುವುದು; ಆದರೆ ಅವರನ್ನು ಪ್ರೀತಿಸುವುದು – ಆಗದು.

**ಪೆಡೆರ್‌ಸನ್ :** (ಮುಖವನ್ನು ಇನ್ನೂ ಅವಳಿಂದಾಚೆ ತಿರುಗಿಸಿಕೊಂಡೇ) ಅದರ ಅನುಭವವಿಲ್ಲದವರಿಗೆ ಮಾತನಾಡುವುದು ಸುಲಭ.

**ಲಿಯೊನಾರ್ಡ :** ಅದರ ಅನುಭವವೆ? — ಅದನ್ನು ಹೇಳುವುದು ಸಾಧ್ಯವಿಲ್ಲ. ಈ ಸಂಜೆ ಏಳು ಗಂಟೆಗೆ ನನ್ನಲ್ಲಿಗೆ ಬಾ.

**ಪೆಡೆರ್‌ಸನ್ :** ಆಗಲಿ, ತಾಯಿ.

**ಲಿಯೊನಾರ್ಡಾ:** ಆಗ ಇದನ್ನು ಕುರಿತು ನಿನ್ನೊಡನೆ ಮಾತನಾಡುತ್ತೇನೆ. ಇಬ್ಬರೂ ಹಾಗೇ ಒಟ್ಟಿಗೆ ಸುತ್ತಾಡಿಕೊಂಡು ಬರೋಣ.

**ಪೆಡೆರ ಸನ್:** ಥ್ಯಾಂಕ್ ಯು, ತಾಯಿ.

**ಲಿಯೊನಾರ್ಡಾ:** ನಿನ್ನ ಕಷ್ಟದಲ್ಲಿ ನಾನು ಸಹಾಯಮಾಡಲು ಸಾಧ್ಯವಾಗಬಹುದು ಎಂದುಕೊಂಡಿದ್ದೇನೆ, ಪೆಡೆರ್‌ಸನ್. ಯೋಚಿಸಬೇಡ—ಇಟ್ಟಿಗೆಗಳ ವಿಷಯ ಮರೆತುಬಿಡು, ನಾನು ಹೇಳಿದ್ದೂ ಮರೆತುಬಿಡು. ಕ್ಷಮಿಸು, ಪೆಡೆರ್‌ಸನ್! (ತನ್ನ ಕೈ ಅವನ ಕಡೆ ನೀಡುವಳು)

**ಪೆಡೆರ್‌ಸನ್:** (ಆಕೆಯ ಕೈಯನ್ನು ಗ್ರಹಿಸಿ) ಓ, ತಾಯಿ!

(ಜನರಲ್ ರೋಸೆನ್ ಪ್ರವೇಶಿಸುವನು.)

**ರೋಸೆನ್:** ಗುಡ್ ಮಾರ್ನಿಂಗ್! (ಪೆಡೆರ್‌ಸನ್ ಕೊಠಡಿಯನ್ನು ದಾಟಿ ಬರುವನು.) ದೇವರೇ ಗತಿ, ಪೆಡೆರ್‌ಸನ್, ಕರಗುತ್ತಿರುವ ಬೆಣ್ಣೆಮುದ್ದೆಯ ಹಾಗೆ ಕಾಣುತ್ತಿದ್ದೀಯೆ! (ಪೆಡೆರ್‌ಸನ್ ಹೊರಗೆ ಹೋಗುವನು. ರೋಸೆನ್ ಲಿಯೊನಾರ್ಡಾ ಕಡೆಗೆ ತಿರುಗುವನು.) ಇಂಥಾ ಸೊಗಸಾದ ದಿನ, ಬೆಳಗ್ಗೆ ಇಷ್ಟು ಹೊತ್ತಿಗೆ ಮುಂಚೆ, ತಪ್ಪೊಪ್ಪಿಗೆಯನ್ನು ಕೇಳಿ ಕ್ಷಮಿಸಿ ಕರುಣಿಸುವ ಪಾದ್ರಿಯ ಪಾತ್ರ ಧರಿಸುವುದೆ? ಛೆ ಛೆ ಛೆ ಛೆ!—ಅಂದ ಹಾಗೆ, ಆಗಟ್ ಇಂದ ಏನಾದರೂ ಸುದ್ದಿ ಬಂತೆ?

**ಲಿಯೊನಾರ್ಡಾ:** (ತನ್ನ ಹ್ಯಾಟನ್ನು ಹಾಕಿಕೊಳ್ಳುತ್ತ) ಇಲ್ಲ, ಆ ಮಗುವಿಗೆ ಏನಾಗಿದೆಯೋ ನಾನು ಕಾಣೆ. ಸುಮಾರು ಸುಮಾರು ಒಂದು ಪಕ್ಷವಾಯಿತು.

**ರೋಸೆನ್:** ಅವಳಿಗೇನು—ಖುಷಿಯಾಗಿದ್ದಾಳೆ. ನಾನು ಕೂಡ ಖುಷಿಯಾಗಿದ್ದಾಗ ಏನೂ ಕಾಗದವನ್ನು ಬರೆಯುತ್ತಿರಲಿಲ್ಲವೆಂದು ನನಗೆ ಜ್ಞಾಪಕ.

**ಲಿಯೊನಾರ್ಡಾ:** (ಅವನ ಕಡೆ ಕುರಿತು,) ಹೂಂ—ನೆನ್ನೆ ರಾತ್ರೆ ನೀನೂ ಖುಷಿಯಾಗಿದ್ದಿರಬೇಕು ಎಂದು ಕಾಣುತ್ತದೆ, ಅಲ್ಲ?

**ರೋಸೆನ್:** ಹಾಗೆ ಕಾಣಿಸುವೆನೇನು? ಛಿಃ ಛಿಃ! ಒಂದು ಸ್ನಾನ ಮುಗಿಸಿ, ಕುದುರೆ ಏರಿ ಆದ ಮೇಲೆ—

**ಲಿಯೊನಾರ್ಡ:** ಈ ಇಂಥದು ಹೀಗೇ ಮುಂದುವರಿಯುವುದು ಸಾಧ್ಯವಿರುವುದಿಲ್ಲ.

**ರೋಸೆನ್:** ನಾನು ಇಲ್ಲಿರುವುದು ಸಾಧ್ಯವಿಲ್ಲವಾದರೆ, ನಾನು ನನ್ನ ಕ್ಲಬ್ಬಿಗೆ ಹೋಗಬೇಕಾಗುತ್ತೆ ಎಂಬುದು ನಿನಗೆ ಚೆನ್ನಾಗಿ ಗೊತ್ತು.

**ಲಿಯೊನಾರ್ಡ:** ಆದರೆ, ಇದಿಲ್ಲದೆ ನಿನ್ನ ಕ್ಲಬ್ಬಿಗೆ ಹೋಗುವುದು ಸಾಧ್ಯವಿಲ್ಲವೆ? (ಎಂದು ಜುಗುಪ್ಸೆಯಿಂದ ಅರ್ಧೋಕ್ತಿಯಲ್ಲಿ ನಿಲ್ಲಿಸುವಳು.)

**ರೋಸೆನ್:** ನಿನ್ನ ಅರ್ಥ ಗೊತ್ತಾಯಿತು, ನನ್ನ ದುರದೃಷ್ಟ. ಯಾವಾಗಲೂ ಒಂದು ಲೋಟ ಹೆಚ್ಚಾಗಿ ಕೊಟ್ಟುಬಿಡುತ್ತಾರೆ.

**ಲಿಯೊನಾರ್ಡ:** ಒಂದು ಲೋಟವೆ? ಮೂರು ಎನ್ನು.

**ರೋಸೆನ್:** ಬೇಕಾದರೆ, ಮೂರು ಎನ್ನು. ಲೆಕ್ಕಾಚಾರದಲ್ಲಿ ನಾನು ಎಂದೂ ಸೊನ್ನೆ ಎಂಬುದು ನಿನಗೆ ಗೊತ್ತು.

**ಲಿಯೊನಾರ್ಡ:** ಆಗಲಿ, ಈಗ ನೀನು ಒಬ್ಬನೇ ಸವಾರಿ ಹೋಗಬಹುದು.

**ರೋಸೆನ್:** ಓ, ಆದರೆ—

**ಲಿಯೊನಾರ್ಡ:** ಹೌದು, ನೆನ್ನೆ ರಾತ್ರೆ ಕುಡಿದು ಅಮಲೇರಿದ್ದವನ ಸಂಗಡ ಇವೊತ್ತು ನಾನು ಕುದುರೆಯೇರಿ ಹೋಗುವುದಿಲ್ಲ. (ತನ್ನ ಹ್ಯಾಟನ್ನು ತೆಗೆದಿರಿಸುವಳು.) ಹ್ಯಾನ್ಸ್! (ಹ್ಯಾನ್ಸ್ ಹೊರಗಿನಿಂದ ಉತ್ತರ ಹೇಳುವುದು ಕೇಳಿಸುತ್ತದೆ.) ಸದ್ಯಕ್ಕೆ ನನ್ನ ಕುದುರೆಯನ್ನು ಲಾಯುಕ್ಕೆ ಸೇರಿಸು.

**ರೋಸೆನ್:** ಇದು ಶಿಕ್ಷೆ ನನಗೆ ಮಾತ್ರವಲ್ಲ, ನಿನಗೂ ಶಿಕ್ಷೆ ಕೊಟ್ಟುಕೊಳ್ಳುತ್ತಿದ್ದೀಯೆ ಎಂಬುದು ನಿನಗೆ ಗೊತ್ತು. ಇಂಥ ದಿನದಲ್ಲಿ ನೀನು ಹೊರಗೆ ಹೋಗುವುದೆ ತಕ್ಕದ್ದು. ಸ್ಥಳದ ಜನರಿಗೆ ನಿನ್ನ ದರ್ಶನದ ಸಂತೋಷವನ್ನು ತಪ್ಪಿಸುವುದು—ಇದು ಪಾಪ!

**ಲಿಯೊನಾರ್ಡ:** ಏನು ಮಾಡಿದರೂ ನಿನಗೆ ಹುಡುಗಾಟವಾಡದೆ ಘನವಾಗಿರುವುದಕ್ಕೆ ಸಾಧ್ಯವಿಲ್ಲವೆ?

**ರೋಸೆನ್:** ಸಾಧ್ಯ. ನಿನಗೆ ಎಂದು ಏನಾದರೂ ಅಗತ್ಯ ಬೀಳುತ್ತದೋ ಅಂದು ನಾನು ಘನವಾಗಿರುತ್ತೇನೆ.

**ಲಿಯೊನಾರ್ಡ್ಾ**: ಅಂಪರೆ, ನನಗೆ ಯಾವುದಾದರೂ ದೌರ್ಭಾಗ್ಯ ಸಂಭವಿಸುವವರೆಗು ಇಲ್ಲಿ ಹೀಗೆಯೇ ಕಾಯುತ್ತಿರಬೇಕೆಂದಿರುವೆಯೇನು? ನೀನು ಬಹುಕಾಲ ಕಾದುಕೊಂಡಿರಬೇಕಾದೀತು. (ಬರೆಯುವ ಮೇಜಿನ ಬಳಿ ಹೋಗುವಳು.)

**ರೋಸೆನ್**: ನಾನೂ ಹಾಗೇ ಅಂದುಕೊಂಡಿದ್ದೇನೆ. ಏಕೆಂದರೆ, ಈ ಮಧ್ಯೆ ಇಲ್ಲಿಗೆ ಹೀಗೆ ಬರುತ್ತಿರುವುದು ಸಾಧ್ಯವಾಗುತ್ತದೆ.

**ಲಿಯೊನಾರ್ಡ್ಾ**: ಅಮೆರಿಕಾದಿಂದ ನಿನಗೆ ಆರ್ಡರ್ಸ್ ಬರುವವರೆಗೆ.

**ರೋಸೆನ್**: ಹೌದು ಮತ್ತೆ—ಷರ್ಮನ್ ಇಂದ ಆರ್ಡರ್ಸ್ ಬರುವ ವರೆಗೆ.

**ಲಿಯೊನಾರ್ಡ್ಾ**: ಹಾಗಾದರೆ ಏನೂ ಆರ್ಡರ್ಸ್ ಬಂದಿಲ್ಲ?

**ರೋಸೆನ್**: ಇಲ್ಲ

**ಲಿಯೊನಾರ್ಡ್ಾ**: ಏಕೋ ತುಂಬ ಸಂಶಯವಾಗಿ ತೋರತೊಡಗಿದೆ. ನಿನ್ನ ಕೈಯಲ್ಲಿ ಅವನಿಗೆ ಬರೆಯಿಸಿ ಎಷ್ಟು ಕಾಲವಾಯಿತು?

**ರೋಸೆನ್**: ಓ, ಅದೆಲ್ಲ ಮರೆತುಹೋಗಿದೆ.

**ಲಿಯೊನಾರ್ಡ್ಾ**: ನನಗೆ ಈಗ ಎನ್ನಿಸುತ್ತೆ—. ನೀನು ಬರೆದೆ ತಾನೆ?

**ರೋಸೆನ್**: ಖಂಡಿತ ಬರೆದೆ. ನಾನು ಯಾವಾಗಲೂ ನೀನು ಹೇಳಿದ್ದು ಮಾಡುತ್ತೇನೆ

**ಲಿಯೊನಾರ್ಡ್ಾ**: ಮೀಸೆ ತಿರುವುತ್ತ ನೀನು ಅಲ್ಲಿ ನಿಂತು—ನೀನು ಅದು ಮಾಡಿದಾಗ ಏನೋ ಅವಿವೇಕ ನಡೆಯುತ್ತಿದೆ ಎಂದು ನನಗೆ ಯಾವಾಗಲೂ ಗೊತ್ತು—.

**ರೋಸೆನ್**: ಹಾಗೆ ಊಹಿಸುವುದು ಏನು ನ್ಯಾಯ?

**ಲಿಯೊನಾರ್ಡ್ಾ**: ನೀನು ಬರೆದೇ ಇಲ್ಲ. ನನಗೆ ಈ ಮೊದಲೇ ಇದು ಏಕೆ ತೋಚಲಿಲ್ಲ?

**ರೋಸೆನ್**: ಮತ್ತೆ ಮತ್ತೆ ಬರೆದಿದ್ದೇನೆ, ನನ್ನ ಮಾತು ನಂಬು.

**ಲಿಯೊನಾರ್ಡ್ಾ**: ಆದರೆ, ಷರ್ಮನ್ನಿಗೆ ಅಲ್ಲ. ನೀನು ಪುನಃ ಕೆಲಸಕ್ಕೆ ಹಾಜರಾಗುತ್ತೇನೆಂದು ವರದಿ ಮಾಡಿಕೊಂಡಿಲ್ಲ.

**ರೋಸೆನ್** : ನಾನು ಎಷ್ಟೋ ಬಾರಿ ಹೇಳಿದ್ದೇನಲ್ಲ—ಆ ರಷ್ಯದ ಸಿಗರೇಟುಗಳು ಜ್ಞಾಪಕ ಉಂಟಾ? ಈಗ ಕೆಲವು ನನ್ನ ಹತ್ತಿರ ಇವೆ. ಹೇಗಿರುತ್ತೋ ನೋಡೋಣ ಎಂದು ಕೆಲವು ಹಾಗೇ ತಂದೆ. ಒಂದು ಕೊಡಲೇನು ?

**ಲಿಯೊನಾರ್ಡ್ರಾ**: ನನಗೆ ಮುಖ ಕೊಟ್ಟು ಮಾತನಾಡುವುದಕ್ಕೆ ನಾಚಿಕೆ ಯಾಗುವುದಿಲ್ಲ ನಿನಗೆ ?

**ರೋಸೆನ್** : ನೀನು ಹೇಳಿದ್ದನ್ನೆಲ್ಲ ಮಾಡುತ್ತೇನೆ—

**ಲಿಯೊನಾರ್ಡ್ರಾ**: ಎರಡು ತಿಂಗಳಿಗೆ ಮೇಲ್ಪಟ್ಟು ಏನೇನೋ ಸಬೂಬು ಹೇಳಿ ವಂಚಿಸುತ್ತಿದ್ದೀಯೆ. ಒಳ್ಳೆಯ ನಾಟಕ ಕಟ್ಟುತ್ತಿದ್ದೀಯೆ, ನನ್ನೊಡನೆ! ಅಮೆರಿಕದ ಯುದ್ಧವನ್ನು ನೋಡಿರುವ ಒಬ್ಬ ಆಫಿಸರ್, ಪ್ರಶಸ್ತಿ ಪದವಿ ಸ್ಥಾನಮಾನ ಇವುಗಳನ್ನು ಪಡೆದವನು ಹೀಗೆ ಈ ರೀತಿಯಾಗಿ – ಇನ್ನೂ ಇತರ ರೀತಿಗಳಲ್ಲಿ – ಈಗ್ಗೆ ಸುಮಾರು ಒಂದು ಪೂರ್ತಿ ವರ್ಷವಾಯಿತು – ಕಾಲ ಹಾಳುಮಾಡುತ್ತ—

**ರೋಸೆನ್** : ಕ್ಷಮಿಸಬೇಕು—ಎಂಟು ತಿಂಗಳು ಮಾತ್ರ.

**ಲಿಯೊನಾರ್ಡ್ರಾ**: ಅಷ್ಟು ದೀರ್ಘ ಕಾಲ ಸಾಲದೇನು ?

**ರೋಸೆನ್** : ಅತಿ ದೀರ್ಘ. ಆದರೆ, ನಾನು ಹಾಗೇಕೆ ಮಾಡಿರುವೆ ನೆಂಬುದು ಮಿಕ್ಕವರಿಗಿಂತ ಚೆನ್ನಾಗಿ, ನಿನಗೆ ಗೊತ್ತು.

**ಲಿಯೊನಾರ್ಡ್ರಾ**: ನಾನು ನಿನ್ನನ್ನು ಇಲ್ಲಿಗೆ ಬರಹೇಳಿದೆನೆ ? ಹೀಗೆ ಮಾಡಿದರೆ, ನನಗೇ ಸಾಕಾಗಿ ಸೋಲುವೆನೆಂದುಕೊಂಡಿರುವೆಯ ?

**ರೋಸೆನ್** : ಲಿಯೊನಾರ್ಡ್ರಾ! (ಅವಳು ಅವನ ಕಡೆ ನೋಡುವಳು ; ಅವನು ಸಾಂಪ್ರದಾಯಿಕವಾಗಿ ಅವಳಿಗೆ ಬಾಗಿ ನಮಿಸಿ,) ಕ್ಷಮಾಪಣೆ ಕೇಳಿಕೊಳ್ಳುತ್ತೇನೆ. ಮಿಸೆಸ್ ಫಾಲ್ಕ್!

**ಲಿಯೊನಾರ್ಡ್ರಾ**: ಇಲ್ಲಿ, ಈಗ, ಈಗಲೇ ಕಾಗದ ಬರೆಯಬೇಕು. ಕೂಡಲೆ ಹೋಗಿ ಕೆಲಸಕ್ಕೆ ಹಾಜರಾಗಬೇಕು.

**ರೋಸೆನ್** : ಹಾಗೆಂದು ನೀನು ಆಜ್ಞೆ ಮಾಡಿದರೆ.

**ಲಿಯೊನಾರ್ಡ್ರಾ**: ಅದನ್ನು ನಾನು ಟಪಾಲಿಗೆ ಹಾಕುತ್ತೇನೆ.

**ರೋಸೆನ್** : ತುಂಬ ಥ್ಯಾಂಕ್ಸ್.

**ಲಿಯೊನಾರ್ಡಾ:** ಪುನಃ ಮೀಸೆ ತಿರಿಚುತ್ತಿದ್ದೀಯೆ. ಮನಸ್ಸಿನಲ್ಲಿ ಏನು ಸಂಚು ಮಾಡುತ್ತಿದ್ದೀಯೆ?

**ರೋಸೆನ್ :** ನಾನೆ ?— ಇಲ್ಲಿ ಬರೆಯಲೆ? (ಮೇಜಿನ ಬಳಿ ಹೋಗುವನು.)

**ಲಿಯೊನಾರ್ಡಾ :** ಆಗಬಹುದು. (ಅವನು ಲೇಖನಿ ಎತ್ತಿಕೊಳ್ಳುವನು.) ಆಃ, ಗೊತ್ತಾಯಿತು! ಇಲ್ಲಿಂದ ಮನೆಗೆ ಹೋದ ಕೂಡಲೆ, ಈ ಕಾಗದವನ್ನು ರದ್ದುಮಾಡುವಂತೆ ಮತ್ತೊಂದು ಕಾಗದ ಬರೆಯುತ್ತೀಯೆ!

**ರೋಸೆನ್ :** ಹೌದು. ಅದು ಸಹಜ ತಾನೆ.

**ಲಿಯೊನಾರ್ಡಾ :** ಹ, ಹ, ಹ! (ಕುಳಿತುಕೊಳ್ಳುವಳು.) ಸರಿ, ಇನ್ನು ನನ್ನ ಕೈಯಲ್ಲಿ ಸಾಧ್ಯವಿಲ್ಲ. ನಿನ್ನ ಗೋಜು ಸಾಕು.

**ರೋಸೆನ್ :** ಥ್ಯಾಂಕ್ ಯು! – ಹಾಗಾದರೆ, ನನ್ನ ಸಿಗರೇಟ್‌ಗಳಲ್ಲಿ ಒಂದನ್ನು ನೋಡುತ್ತೀಯೇನು?

**ಲಿಯೊನಾರ್ಡಾ :** ಒಲ್ಲೆ.

**ರೋಸೆನ್ :** ಕುದುರೆಸವಾರಿ ಬರುವುದಿಲ್ಲ?

**ಲಿಯೊನಾರ್ಡಾ :** ಇಲ್ಲ.

**ರೋಸೆನ್ :** ನಾನು ಈ ಸಂಜೆ ಇಲ್ಲಿಗೆ ಬರುವುದು?

**ಲಿಯೊನಾರ್ಡಾ :** ನನಗೆ ಬೇರೆ ಕೆಲಸವಿರುತ್ತದೆ.

**ರೋಸೆನ್ :** ಆದರೆ ನಾಳೆ ಬೆಳಗ್ಗೆ ಕುದುರೆಸವಾರಿ ಉಂಟಷ್ಟೆ?

**ಲಿಯೊನಾರ್ಡಾ:** ಗೊತ್ತಿಲ್ಲ.

**ರೋಸೆನ್ :** ಹಾಗಾದರೆ ಕೇಳುವುದಕ್ಕೆ ಬರುವ ಸ್ವಾತಂತ್ರ್ಯವನ್ನು ವಹಿಸಿಕೊಳ್ಳುತ್ತೇನೆ. ಈಗ ಸದ್ಯಕ್ಕೆ – ಗುಡ್ ಡೆ!

**ಲಿಯೊನಾರ್ಡಾ :** ನೋಡು. ಬಾಗಿಲ ಹತ್ತಿರ ಯಾವನೋ ಅಪರಿಚಿತ! (ಏಳುವಳು.)

**ರೋಸೆನ್ :** ಏನು? (ತಿರುಗಿನೋಡಿ,) ಅವನೆ? ಇಲ್ಲಿಗೆ ಬರುವ ಮುಖವುಂಟೆ? (ತೆರೆದ ಕಿಟಕಿಯಿಂದಾಚೆಗೆ ನೋಡಿ,) ಶ್! ಶ್ – ಹ್ಯಾನ್ಸ್! – ನನ್ನ ಕುದುರೆ ಬಿಚ್ಚಿಕೊಂಡಿರುವುದು ಕಾಣುವುದಿಲ್ಲ? (ಅವಸರದಿಂದ ಅಪರಿಚಿತನನ್ನು ದಾಟಿಕೊಂಡು ಹೋಗುವಾಗ, ಅಪರಿಚಿತನು ಬಾಗಿ ನಮಸ್ಕರಿಸುವನು.) ಶ್! ಶ್!

(ಹಾಗ್‌ಬಾರ್ಟ್ ಪ್ರವೇಶಿಸುವನು)

**ಹಾಗ್‌ಬಾರ್ಟ್ :** ತಾಯೀ ! (ಅಷ್ಟಕ್ಕೇ ನಿಲ್ಲಿಸುವನು.)

**ಲಿಯೊನಾರ್ಡ :** ಏನು—?

**ಹಾಗ್‌ಬಾರ್ಟ್ :** ಹಾಗಾದರೆ, ನಾನು ಯಾರು ಗೊತ್ತಿಲ್ಲ ನಿಮಗೆ ?

**ಲಿಯೊನಾರ್ಡ :** ಇಲ್ಲ.

**ಹಾಗ್‌ಬಾರ್ಟ್:** ನಾನು ಹಾಗ್‌ಬಾರ್ಟ್ ತಲ್ಲ್‌ಹೌಗ್.

**ಲಿಯೊನಾರ್ಡ :** ಹಾಗೆಂದು ನನಗೆ ಹೇಳುವಷ್ಟು ಧೈರ್ಯವೆ ನಿನಗೆ ?– ಅದೂ ತುಟಿಗಳಲ್ಲಿ ಹುಸಿನಗು ನಗುತ್ತ ?

**ಹಾಗ್‌ಬಾರ್ಟ್ :** ನನಗೆ ಇಷ್ಟು ಅವಕಾಶ ಕೊಟ್ಟರೆ—

**ಲಿಯೊನಾರ್ಡ :** ಇಲ್ಲಿ ಬರಲು ನಿನಗೆ ಎಷ್ಟು ಧೈರ್ಯ ?

**ಹಾಗ್‌ಬಾರ್ಟ್ :** ನನಗೆ ಇಷ್ಟು ಅವಕಾಶ ಕೊಟ್ಟರೆ—

**ಲಿಯೊನಾರ್ಡ:** ಒಂದು ಪದವೂ ಬೇಡ. ಅಥವಾ, ಅದೇ ಹೆಸರಿನ ಇಬ್ಬರು ಇರುವುದು ಸಾಧ್ಯವೆ ?

**ಹಾಗ್‌ಬಾರ್ಟ್ :** ಇಲ್ಲ.

**ಲಿಯೊನಾರ್ಡ :** ಹಾಗಾದರೆ ಸೀನೇಯೋ—ಆ ಗಾಯನ ಮಂದಿರಕ್ಕೆ ನನಗೂ ನನ್ನ ದತ್ತು ಮಗಳಿಗೂ ಪ್ರವೇಶ ದೊರಕಿಸಬೇಕೆಂದು ಪ್ರಯತ್ನಿಸುತ್ತಿದ್ದಾಗ ಮುಂದೆ ಬಂದು 'ಈ ಹೆಂಗಸಿನ ನಡವಳಿಕೆ ತುಂಬ ಅನುಮಾನ' ಎಂದು ನನ್ನ ವಿಷಯವಾಗಿ ಹೇಳಿದವನು ? ಹೌದಾ ?

**ಹಾಗ್‌ಬಾರ್ಟ್ :** ಹೌದು, ತಾಯಿ ; ಆದರೆ, ನಾನು—

**ಲಿಯೊನಾರ್ಡ :** (ದುಡುಕಿ ಅವನ ಮಾತು ತಡೆದು) ಹಾಗಾದರೆ, ಮೊದಲು ಇಲ್ಲಿಂದ ತೊಲಗು ! – ಹ್ಯಾನ್ಸ್ ! (ಹ್ಯಾನ್ಸ್ ಹೊರಗಿನಿಂದ ಅವಳಿಗೆ ಉತ್ತರ ಕೊಡುವುದು ಕೇಳಿಸುತ್ತದೆ.)

**ಹಾಗ್‌ಬಾರ್ಟ್ :** ಮಿಸೆಸ್ ಫಾಲ್ಕ್, ಮೊದಲು ನನಗೆ ಇಷ್ಟು ಅವಕಾಶ ಕೊಟ್ಟರೆ—

(ಹ್ಯಾನ್ಸ್ ಪ್ರವೇಶಿಸುವನು.)

**ಲಿಯೊನಾರ್ಡ:** ಹ್ಯಾನ್ಸ್, ಈ ಮಹಾಶಯನನ್ನು ಇಲ್ಲಿಂದ ಆಚೆ ಕಳಿಸು.

**ಹ್ಯಾನ್ಸ್ :** ಅಗತ್ಯವಾಗಿ, ತಾಯಿ.

**ಹಾಗ್‌ಬಾರ್ಟ್ :** ಒಂದು ಕ್ಷಣ ತಾಳು, ಹ್ಯಾನ್ಸ್.

**ಹ್ಯಾನ್ಸ್ :** ತಾಳಲೆ, ತಾಯಿ ? (ಲಿಯೊನಾರ್ಡಾ ಕಡೆ ನೋಡುವನು.)

**ಹಾಗ್‌ಬಾರ್ಟ್ :** ಇದು ನಿಮ್ಮ ಸೋದರಸೊಸೆಗೆ ಸಂಬಂಧಪಟ್ಟಿದ್ದು, ಮಿಸೆಸ್ ಫಾಲ್ಕ್.

**ಲಿಯೊನಾರ್ಡಾ :** ಆಗಟ್! ಏನಾದರೂ ಆಯಿತೇನು ಅವಳಿಗೆ? ಅವಳಿಂದ ನನಗೆ ಕಾಗದವೆ ಇಲ್ಲ!

**ಹಾಗ್‌ಬಾರ್ಟ್ :** ಹೊರಗೆ ಕಾದಿರು, ಹ್ಯಾನ್ಸ್!

**ಹ್ಯಾನ್ಸ್ :** (ಲಿಯೊನಾರ್ಡಾಗೆ) ಕಾದಿರಲೆ, ತಾಯಿ ?

**ಲಿಯೊನಾರ್ಡಾ :** ಹೋಗು, ಹೋಗು. (ಹ್ಯಾನ್ಸ್ ಹೊರಗೆ ಹೋಗುವನು) ಏನದು ?

**ಹಾಗ್‌ಬಾರ್ಟ್ :** ಕೆಟ್ಟ ಸಮಾಚಾರವೇನೂ ಇಲ್ಲ.

**ಲಿಯೊನಾರ್ಡಾ :** ಹಾಗಾದರೆ, ನೀನು ಅವಳ ಪರವಾಗಿ ಇಲ್ಲಿ ಬಂದಿರುವುದಕ್ಕೆ ಅರ್ಥ ?

**ಹಾಗ್‌ಬಾರ್ಟ್ :** ಸ್ನಾನಘಟ್ಟಗಳಲ್ಲಿ ಒಬ್ಬರನ್ನು ಒಬ್ಬರು ತಪ್ಪಿಸಿಕೊಳ್ಳುವುದು ಎಷ್ಟು ಕಷ್ಟವೆಂದು ನಿಮಗೆ ತಿಳಿದಿರಬೇಕು. ನಿಮ್ಮ ಸೋದರಸೊಸೆಯೇನೋ ತನ್ನ ಕೈಲಾದಷ್ಟೂ ಮಾಡಿದಳೆಂದು ಒಪ್ಪಿಕೊಳ್ಳಲೇಬೇಕು. ನನ್ನನ್ನು ಎಷ್ಟು ನಿಕೃಷ್ಟವಾಗಿ ಕಾಣಬಹುದೋ ಅಷ್ಟೂ ನಿಕೃಷ್ಟವಾಗಿ ಕಂಡಳು — ಇನ್ನೂ ಅದಕ್ಕಿಂತ ಮುಂದೆ ಹೋದಳೆಂದೇ ಹೇಳಬೇಕು; ಆದರೆ ಅವಳು ಮಾತನಾಡಿಸಿದ ಜನರನ್ನು ನಾನು ಮಾತನಾಡಿಸದ ಹಾಗೆ, ಅವಳು ಇದ್ದ ಸ್ಥಳದಲ್ಲಿ ನಾನು ಇರಲಾರದ ಹಾಗೆ ತಡೆಗಟ್ಟುವುದು ಅವಳಿಗೆ ಸಾಧ್ಯವಾಗಲಿಲ್ಲ. ಅದರ ಪರಿಣಾಮವಾಗಿ – ಸರಿ – ಅವರು ನನ್ನ ವಿಚಾರ ಮಾತನಾಡುವುದು ಅವಳ ಕಿವಿಗೆ ಬಿತ್ತು, ನಾನು ಅವರೊಡನೆ ಮಾತನಾಡುವುದನ್ನು ಕೇಳಿದಳು – ಕೊನೆಗೆ ಅವಳು ತಾನೇ ನನ್ನೊಡನೆ ಮಾತನಾಡಿದಳು.

**ಲಿಯೊನಾರ್ಡಾ :** ನಿನ್ನೊಡನೆ ಮಾತನಾಡಿದಳೆ?

**ಹಾಗ್ ಬಾರ್ಸ್ಟ್:** ಹೌದು. ಇಲ್ಲವೆಂದು ಏನು ಪ್ರಯೋಜನ? ವಾಸ್ತವವಾಗಿ ನನ್ನೊಡನೆ ಮಾತನಾಡಿದಳು. ಒಂದು ಬಾರಿಯಲ್ಲ, ಅನೇಕ ಬಾರಿ.

**ಲಿಯೊನಾರ್ಡಾ:** ಈಗ ನನ್ನನ್ನು ಬಂದು ಕಂಡದ್ದಕ್ಕೆ ಅರ್ಥ?

**ಹಾಗ್ ಬಾರ್ಸ್ಟ್:** ನನಗೆ ಇಷ್ಟು ಅವಕಾಶ ಕೊಟ್ಟರೆ—

**ಲಿಯೊನಾರ್ಡಾ:** ನಿನ್ನ ಸಂದೇಶವನ್ನು ಸಂಗ್ರಹವಾಗಿ ಸಂಕ್ಷೇಪವಾಗಿ ಹೇಳು – ಅದಕ್ಕಿಂತ ಒಂದು ಹೆಚ್ಚು ಮಾತೂ ಬೇಡ

**ಹಾಗ್ ಬಾರ್ಸ್ಟ್:** ನನಗದು ಸಾಧ್ಯವಾಗಲಾರದು – ನೀವು ಅವಕಾಶ ಕೊಡದಿದ್ದರೆ.

**ಲಿಯೊನಾರ್ಡಾ:** ನಿನಗೆ ಸಾಧ್ಯವಾಗಲಿ, ಆಗದಿರಲಿ, ಬೇರೆ ಯಾವುದಕ್ಕೂ ನಾನು ಅವಕಾಶ ಕೊಡುವುದಿಲ್ಲ. ನೀನು ನನ್ನ ಸಂಗಡಲೂ ಸಂಭಾಷಣೆ ನಡಸುತ್ತಿದ್ದೆಯೆಂದು ಹೇಳಿಕೊಳ್ಳುವುದಕ್ಕೆ ನಾನು ಅವಕಾಶ ಒದಗಿಸಲಾರೆ.

**ಹಾಗ್ ಬಾರ್ಸ್ಟ್:** ನಿಮ್ಮದು ಏನೂ ಆಕ್ಷೇಪವಿಲ್ಲದಿದ್ದರೆ, ನಾನು ನಿಮ್ಮ ಸೋದರಸೊಸೆಯನ್ನು ಪ್ರೀತಿಸುತ್ತೇನೆ, ಮಿಸೆಸ್ ಫಾಲ್ಕ್.

**ಲಿಯೊನಾರ್ಡಾ:** ನೀನೆ? ಆಗಟ್ ಜೊತೆಗೆ – ಹಾಗೇ ಆಗಬೇಕು ನಿನಗೆ!

**ಹಾಗ್ ಬಾರ್ಸ್ಟ್:** ನನಗೆ ಗೊತ್ತು.

**ಲಿಯೊನಾರ್ಡಾ:** ಹ, ಹ! ಗಾಳಿ ಹಾಗೆ ಬೀಸುತ್ತಿದೆ!

(ತೆರೆದ ಬಾಗಿಲ ಬಳಿ ಹ್ಯಾನ್ಸ್ ಕಾಣಿಸಿಕೊಳ್ಳುವನು.)

**ಹ್ಯಾನ್ಸ್:** ಈಗ ನಾನು ಹೋಗಬಹುದೆ, ತಾಯಿ?

**ಲಿಯೊನಾರ್ಡಾ:** ಹ, ಹ! – ಹುಂ, ನೀನು ಹೋಗಬಹುದು. (ಹ್ಯಾನ್ಸ್ ಹೋಗುವನು.) ಆಯ್ತು, ನೀನು ಹೇಳಬೇಕಾದ್ದು ಇನ್ನೇನುಂಟು? ಆಗಟ್‌ಗೆ ಇದರ ಬಗ್ಗೆ ಏನಾದರೂ ಸೂಚನೆ ಕೊಟ್ಟಿರುವೆಯೇನು?

**ಹಾಗ್ ಬಾರ್ಸ್ಟ್:** ಹೌದು.

**ಲಿಯೊನಾರ್ಡಾ:** ಏನು ಉತ್ತರಬಂತು ನಿನಗೆ? – ಮಾತನಾಡದಿರುವೆ. ನನಗೆ ಹೇಳುವುದಕ್ಕೆ ಕಷ್ಟವಾಗುತ್ತದೆಯೆ?

**ಹಾಗ್‌ಬಾರ್ಟ್:** ನೀವು ಇದನ್ನು ಸುಮುಖವಾಗಿ ಕೇಳುತ್ತಿರುವುದು ಸಂತೋಷ, ಮಿಸೆಸ್ ಫಾಲ್ಕ್.

**ಲಿಯೊನಾರ್ಡಾ:** ಹೌದು, ನಗು ಬರುತ್ತದೆ ಅಲ್ಲವೆ? – ಆಯ್ತು, ಆಗಟ್ ಏನು ಹೇಳಿದಳು? ಸಾಮಾನ್ಯವಾಗಿ ಅವಳು ಹೇಳಬೇಕಾದ್ದು ಸಮೃದ್ಧಿಯಾಗಿರುತ್ತದೆ

**ಹಾಗ್‌ಬಾರ್ಟ್:** ಹೌದು, ಸಮೃದ್ಧಿಯಾಗಿರುತ್ತದೆ. ಇವೊತ್ತು ಇಬ್ಬರೂ ಒಂದೇ ದೋಣಿಯಲ್ಲಿ ಬಂದೆವು.

**ಲಿಯೊನಾರ್ಡಾ:** ಒಂದೇ ದೋಣಿಯಲ್ಲಿ? ಆಗಟ್ ಜೊತೆಗೆ ನೀನು? ಅವಳನ್ನು ಪೀಡಿಸುತ್ತಿರುವೆಯೇನು?

**ಹಾಗ್‌ಬಾರ್ಟ್:** ಮಿಸೆಸ್ ಫಾಲ್ಕ್, ನೀವು ನನಗೆ ಅವಕಾಶ ಕೊಡದಿದ್ದರೆ, ಇದು ನಿಮಗೆ ಅರ್ಥವಾಗುವುದು ಬಹುಶಃ ಸಾಧ್ಯವಾಗಲಾರದು—

**ಲಿಯೊನಾರ್ಡಾ:** ಇನ್ನು ಉಳಿದದ್ದನ್ನು ನನ್ನ ಸೋದರಸೊಸೆಯ ಬಾಯಿಂದಲೇ ಕೇಳಬಯಸುತ್ತೇನೆ. ಅವಳೂ ಇಷ್ಟರಲ್ಲೆ ಇಲ್ಲಿಗೆ ಬಂದಾಳು ಎಂದುಕೊಂಡಿದ್ದೇನೆ.

**ಹಾಗ್‌ಬಾರ್ಟ್:** ಓಹೊ, ಹೌದು. ಆದರೂ—

**ಲಿಯೊನಾರ್ಡಾ:** ಇನ್ನು ಅಂತಹದಕ್ಕೆಲ್ಲ ಇಲ್ಲಿ ಅವಕಾಶವಿರುವುದಿಲ್ಲ. ನಿನ್ನ ಕೇಡಿಗತನದಿಂದ ನನ್ನನ್ನು ಪೀಡಿಸಿದಂತೆಯೇ ನಿನ್ನ ಅನುನಯಗಳಿಂದ ನನ್ನ ಸೋದರಸೊಸೆಯನ್ನು ಪೀಡಿಸುವುದಾದರೆ, ಪ್ರಯತ್ನಿಸಲು ಏನೂ ಅಭ್ಯಂತರವಿಲ್ಲ. ಆದರೆ ನೀನು ಇಲ್ಲಿಗೆ ಬರಕೂಡದು. ಅದನ್ನು ನಾನು ನಿಷೇಧಿಸಬಲ್ಲೆ

**ಹಾಗ್‌ಬಾರ್ಟ್:** ಆದರೂ ಮಿಸೆಸ್ ಫಾಲ್ಕ್ ಅವರೆ—

**ಲಿಯೊನಾರ್ಡಾ:** ನಿಜವಾಗಿಯೂ ನನಗೆ ಸಹನೆ ಮೀರಲು ಆರಂಭವಾಗುತ್ತಿದೆ, ಅಥವಾ ಆಗಲೆ ಮೀರಿಹೋಗಿದೆ ಎನ್ನೋಣ ನೀನು ಇಲ್ಲಿಗೆ ಬಂದದ್ದು ಏತಕ್ಕೆ?

**ಹಾಗ್‌ಬಾರ್ಟ್:** ಸರಿ. ಬೇರೆ ಯಾವ ದಾರಿಯೂ ಇಲ್ಲದ್ದರಿಂದ – ನೇರವಾಗಿ ಹೇಳಿಬಿಡುತ್ತೇನೆ – ಕೇಳಿ. ನಿಮ್ಮ ಎದೆ ಹಾರಿದರೂ ಹಾರ

ಬಹುದು – ನಿಮ್ಮ ಸೋದರಸೊಸೆಯ ಪಾಣಿಗ್ರಹಣಕ್ಕೆ ಅನುಮತಿ ಕೇಳಲು ಬಂದಿದ್ದೇನೆ.

**ಲಿಯೊನಾರ್ಡಾ** : (ತನ್ನ ಕೈಚೀಲಗಳನ್ನೆತ್ತಿಕೊಂಡು,) ನಾನು ಗಂಡುಸಾಗಿದ್ದಿದ್ದರೆ, ನನ್ನ ಉತ್ತರದ ಬಗ್ಗೆ ನಿಮಗೆ ಏನೂ ಅನುಮಾನ 'ಇರಬಾರದು' ಎಂದು ನನ್ನ ಕೈಚೀಲಗಳಿಂದ ನಿಮ್ಮ ಮುಖದ ಮೇಲೆ ಹೊಡೆಯುತ್ತಿದ್ದೆ.

**ಹಾಗ್‌ಬಾರ್ಡ್**: ಆದರೆ ನೀವು ಹೆಂಗುಸಾದ್ದರಿಂದ, ಹೊಡೆಯಲೊಲ್ಲಿರಿ.

(ಹ್ಯಾನ್ಸ್ ಪ್ರವೇಶ).

**ಹ್ಯಾನ್ಸ್** : ಮಿಸ್ ಆಗಟ್ ಬಂದಿದ್ದಾರೆ, ಅಮ್ಮ.

**ಆಗಟ್** : (ಹೊರಗಿನಿಂದ) ಅತ್ತೇ!

**ಲಿಯೊನಾರ್ಡಾ**: : ಆಗಟ್!

(ಆಗಟ್ ಪ್ರವೇಶಿಸುವಳು. ಹ್ಯಾನ್ಸ್ ಹೊರಗೆ ಹೋಗುವನು.)

**ಆಗಟ್** : ಅತ್ತೇ! – ಆ ದರಿದ್ರ ಹ್ಯಾನ್ಸ್! ಅವನಿಗೆ ಸನ್ನೆಮಾಡುತ್ತಿದ್ದೆ – ನಿಮಗೆ ಸುಳುವು ಕೊಡದಂತೆ ಬರಬೇಕೆಂದಿದ್ದೆ.

(ಲಿಯೊನಾರ್ಡಾನ ತೋಳುಗಳೊಳಕ್ಕೆ ನುಗ್ಗುವಳು.)

**ಲಿಯೊನಾರ್ಡಾ** : ಮಗು, ನನಗೆ ವಂಚನೆ ಮಾಡಿದ್ದೀಯಾ?

**ಆಗಟ್** : ನಾನು ವಂಚನೆ ಮಾಡುವುದೆ? ನಿನಗೆ?

**ಲಿಯೊನಾರ್ಡಾ** : ನನಗೆ ಗೊತ್ತಿತ್ತು. (ಅವಳನ್ನು ಆಲಿಂಗಿಸುವಳು.) ಕ್ಷಮಿಸು, ಮಗು! ಒಂದು ಕ್ಷಣ ಏನೋ ಒಂದು ಕೆಟ್ಟ ಅನುಮಾನ ಬಂತು-ಆದರೆ ನಿನ್ನನ್ನು ನೋಡಿದಕೂಡಲೆ ಅದು ಹೋಯಿತು! – ಬಾ, ಮಗು, ಬಾ. ಎಷ್ಟು ಮುದ್ದಾಗಿ ಕಾಣಿಸುತ್ತೀಯೆ! ಬಾ.

**ಆಗಟ್** : ಓ, ಅತ್ತೇ!

**ಲಿಯೊನಾರ್ಡಾ** : ಏನಮ್ಮ?

**ಆಗಟ್** : ನಿನಗೆ ಗೊತ್ತು.

**ಲಿಯೊನಾರ್ಡಾ**: ಆ ನಾಚಿಕೆ ಕೆಟ್ಟವನು ಹೀಡಿಸಿದ್ದು ತಾನೆ? ಹೌದು!

(ಈ ಮಧ್ಯೆ ಹಾಗ್‌ಬಾರ್ಡ್ ನುಣಿಚಿಕೊಂಡು ಹೋಗಿದ್ದಾನೆ.)

**ಆಗಟ್** : ಹಶ್! – ಓ, ಹೊರಟುಹೋಗಿದ್ದಾನೆ! – ಅವನ ಮೇಲೆ ಸಿಟ್ಟಾಗಿದ್ದೆಯ ?

**ಲಿಯೊನಾರ್ಡಾ**: ಅವನ ಯೋಗ್ಯತೆಗೆ ತಕ್ಕಷ್ಟು ಸಿಟ್ಟಾಗಲಿಲ್ಲ.

**ಆಗಟ್** : ಹಾಗೆಂದು ಅವನಿಗೆ ಹೇಳಲಿಲ್ಲವೆ ನಾನು ?

**ಲಿಯೊನಾರ್ಡಾ**: (ನಗುತ್ತ) ಏನು ಹೇಳಿದೆ, ಅವನಿಗೆ?

**ಆಗಟ್** : ಎಷ್ಟು ದುಡುಕು ನಿನಗೆ? ನಿಜವಾಗಿಯೂ ಅವನೊಡನೆ ನಿಷ್ಠುರವಾಗಿದ್ದೆಯ ?

**ಲಿಯೊನಾರ್ಡಾ**: ಎಂದರೆ – ಅವನೊಡನೆ ಸಹಾನುಭೂತಿಯೆ ?

**ಆಗಟ್** : ನನಗೆ – ಅವನೊಡನೆ ? ದೇವರೇ ಗತಿ, ಅವನು ನಿನಗೆ ಹೇಳಲಿಲ್ಲವೇನು ?

**ಲಿಯೊನಾರ್ಡಾ**: ಏನನ್ನ ?

**ಆಗಟ್** : ಅದೇ – ಅದೇ – ನಾವು – ಓ, ಅತ್ತೆ, ಹಾಗೆ ದುರದುರನೆ ನೋಡಬೇಡ! – ಹಾಗಾದರೆ, ನಿನಗೆ ಗೊತ್ತಿಲ್ಲ ಎನ್ನು !

**ಲಿಯೊನಾರ್ಡಾ**: ಗೊತ್ತಿಲ್ಲ ?

**ಆಗಟ್** : ದೇವರೇ ಗತಿ ನನಗೆ! ಅತ್ತೇ—!

**ಲಿಯೊನಾರ್ಡಾ**: ಎಂದರೆ – ನೀನು ಹೇಳುವುದು—

**ಆಗಟ್** : ಹೌದು, ಅತ್ತೆ.

**ಲಿಯೊನಾರ್ಡಾ**: ಅವನೊಡನೆ? ಅವನು—. ಅಷ್ಟೆಲ್ಲ ಆದರೂ, ನೀನು—! ಮುಟ್ಟಬೇಡ, ದೂರ ಹೋಗು.

**ಆಗಟ್** : ಅತ್ತೆ, ನನ್ನ ಅತ್ತೆ, ಇಲ್ಲಿ ಕೇಳು.

**ಲಿಯೊನಾರ್ಡಾ**: ಅವನ ಬಳಿಗೇ ಹೋಗು. ಹೋಗೆ ಆಚೆ.

**ಆಗಟ್** : ಅವನನ್ನು ನೋಡಿರುವೆಯ, ಅತ್ತೆ? ಎಷ್ಟು ಸುಂದರನಾಗಿದ್ದಾನೆ ನೋಡಿದ್ದೀಯಾ ?

**ಲಿಯೊನಾರ್ಡಾ**: ಸುಂದರನೆ? ಅವನು !

**ಆಗಟ್** : ಇಲ್ಲ, ಸ್ವಲ್ಪವೂ ಸುಂದರನಲ್ಲವೆಂದೆ ಹೇಳಬೇಕು. ನಿಜವಾಗಿ, ನೀನು ಸ್ವಲ್ಪ ಮಿತಿಮೀರಿ ಹೋಗುತ್ತಿದ್ದೀಯೆ !

**ಲಿಯೊನಾರ್ಡಾ** : ಅವನು ನನ್ನ ಪಾಲಿಗೆ–'ಈ ಹೆಂಗಸಿನ ನಡತೆ ಅನುಮಾನ' ಎಂದು ಆ ದಿವಸ ಹೇಳಿ, ದೋಷವನ್ನೆ ಹುಡುಕುವ ಈ ಸ್ಥಳೀಯರ ಕಣ್ಣಿನಲ್ಲಿ ನನ್ನನ್ನು ಹಾಸ್ಯಾಸ್ಪದ ಮಾಡಿದ ಮನುಷ್ಯ. ಈಗ ಅವನೆ ನನ್ನ ದತ್ತುಮಗಳ ಮನೋವಲ್ಲಭನಾಗಿ ಬಂದು ಇಲ್ಲಿ ಮುಖ ತೋರಿಸುತ್ತಾನೆ, ಅವನನ್ನು ನಾನು ಸುಂದರನೆಂದು ಗಣಿಸಬೇಕೆಂದು ನೀನು ನಿರೀಕ್ಷಿಸುತ್ತೀಯೆ! ಕೃತಜ್ಞತೆಯಿಲ್ಲದ ಮೂಳಿ!

**ಆಗಟ್** : ಅತ್ತೇ!

**ಲಿಯೊನಾರ್ಡಾ** : ನನ್ನ ಆಯುಷ್ಯದಲ್ಲಿ ಎಂಟು ವರ್ಷ—ಎಂಟು ವರ್ಷಗಳು — ಇಲ್ಲಿ ಬಲಿಕೊಟ್ಟಿದ್ದೇನೆ — ಈ ಸಣ್ಣ ಬಿಲದಲ್ಲಿ, ಸಾಧ್ಯವಾದ ಮಟ್ಟಿಗೂ ಹಿಡಿತಮಾಡಿಕೊಂಡು. ಈಗ ನೀನು, ನಿನಗೆ ಇಷ್ಟೆಲ್ಲಾ ಮಾಡಿದ ನನ್ನನ್ನು ಬಿಟ್ಟು, — ನೀನು ಇನ್ನೂ ಸಾಕಷ್ಟು ಬೆಳೆದು ಕೂಡ ಇಲ್ಲ-- ನನ್ನನ್ನು ಅವಮಾನದಲ್ಲಿ ಮುಳುಗಿಸಿದವನ ತೆರೆದ ತೋಳುಗಳೊಳಕ್ಕೆ ನುಗ್ಗುತ್ತಿದ್ದೀಯೆ. ಇದು ಎಲ್ಲ ಸಹಜವಾಗಿ ನಡೆಯುವುದೇ ಎಂದುಕೊಂಡು ನಾನು ತೆಪ್ಪಗಿರಬೇಕಂತೆ!— ಆದೂ ಅವನು ಸುಂದರನೆಂದು ಮೆಚ್ಚುವುದು ಹೊರತು ಬೇರೇನೂ ಬಾಯಿ ಬಿಡಬಾರದಂತೆ ನಾನು—ನಾನು ಅವನ ಮುಖ ಕೂಡ ನೋಡುವುದಿಲ್ಲ! ಹೋಗೆ ಆಚೆ!

**ಆಗಟ್** : (ಕಣ್ಣೀರಿಡುತ್ತ) ಇದನ್ನು ನಾನೇ ನನಗೆ ಒಂದು ಸಾವಿರ ಸಲ ಹೇಳಿಕೊಂಡಿಲ್ಲ ಎಂದುಕೊಂಡಿರುವೆಯೇನು? ಅದಕ್ಕೇ ನಾನು ನಿನಗೆ ಬರೆಯಲಿಲ್ಲ. ಏನು ಮಾಡಬೇಕೋ ತಿಳಿಯದೆ ನಾನೂ ತುಂಬ ಪೇಚಾಟ ಪಟ್ಟಿದ್ದೇನೆ.

**ಲಿಯೊನಾರ್ಡಾ**: ಇಂಥದು ಆಗುತ್ತದೆ ಎಂಬ ಸುಳುವು ತೋರಿದೊಡನೆ ಇಲ್ಲಿಗೆ ಬಂದು, ನನ್ನ ಆಶ್ರಯ ಪಡೆಯಬೇಕಾಗಿತ್ತು — ನಿನಗೇನಾದರೂ ಉಪಕಾರಸ್ಮರಣೆ ಇದ್ದಿದ್ದರೆ!

**ಆಗಟ್** : ಅತ್ತೇ! (ಮಂಡಿಯೂರಿ) ಓ, ಅತ್ತೇ!

**ಲಿಯೊನಾರ್ಡಾ** : ನೀನು ಇಷ್ಟು ತುಚ್ಛವಾಗಿ ನಡೆದುಕೊಳ್ಳುವೆ ಎಂಬುದನ್ನು ಯೋಚಿಸಿದರೆ—!

**ಆಗಟ್ :** ಅತ್ತೆ, ನಿನ್ನ ವಿಚಾರದಲ್ಲಿ ಹಾಗೆ ನಡೆದುಕೊಂಡೆನಲ್ಲಾ ಎಂದು ಅವನು ಪರಿತಾಪಪಡುತ್ತಿದ್ದುದನ್ನು ನೋಡಿದ್ದರಿಂದಲೇ ನಾನು ಮೊದಲು—

**ಲಿಯೊನಾರ್ಡಾ:** ಪರಿತಾಪವೆ? ಇಲ್ಲಿಗೆ ಬಂದಾಗ ಅವನು ಮೆಲುನಗು ನಗುತ್ತ ಬಂದ!

**ಆಗಟ್ :** ಅದಕ್ಕೆ ಅವನ ದಿಗಿಲೆ ಕಾರಣ, ಅತ್ತೆ

**ಲಿಯೊನಾರ್ಡಾ:** ದಿಗಿಲಾದರೆ ಜನ ಮೆಲುನಗೆ ನಗುತ್ತಾರೆಯೇನೆ ?

**ಆಗಟ್:** ಮಿಕ್ಕವರು ನಗುವುದಿಲ್ಲ, ಆದರೆ ಇವನು ಹಾಗೇ. ಕೇಳು ಅತ್ತೆ, ಮೊದಲು ನನ್ನ ಹತ್ತಿರಲೂ ಹಾಗೇ ಇದ್ದ–ಪೆಚ್ಚುಪೆಚ್ಚಾಗಿ ಮೆಲುನಗು ನಗುತ್ತ ; ಆಮೇಲೆ ಹೇಳಿದ–ಗಾಬರಿಯಿಂದ ಹಾಗೆ ನಗುತ್ತಿದ್ದುದು ಎಂದು.

**ಲಿಯೊನಾರ್ಡಾ:** ನೀನು ಹೇಳುತ್ತಿರುವ ಹಾಗೆ ತಾನು ಮಾಡಿದ್ದು ತಪ್ಪು ಎಂದು ಅವನಿಗೇನಾದರೂ ಅನ್ನಿಸಿದ್ದಿದ್ದರೆ, ಮಾಡಿದ್ದು ತಪ್ಪಾಯಿತು ಎಂದು ಕ್ಷಮೆ ಕೇಳುವುದಕ್ಕೆ ಮೊದಲು ಅವಕಾಶ ಮಾಡಿಕೊಳ್ಳುತ್ತಿದ್ದ.

**ಆಗಟ್ :** ಹಾಗೆ ಮಾಡಲಿಲ್ಲವೇನು ?

**ಲಿಯೊನಾರ್ಡಾ:** ಇಲ್ಲ; ಏನೇನೋ ಬಳಸಿ ಬಳಸಿ ಮಾತನಾಡುತ್ತಾ, ಪೆಚ್ಚುಪೆಚ್ಚಾಗಿ ನಗುತ್ತಾ—

**ಆಗಟ್ :** ಹಾಗಾದರೆ, ಅವನಿಗೆ ಬೆಪ್ಪು ಹಿಡಿಯುವಷ್ಟರಮಟ್ಟಿಗೆ ನೀನು ಅವನನ್ನು ಹೆದರಿಸಿರಬೇಕು. ಅವನಿಗೆ ತುಂಬ ಸಂಕೋಚ, ಅತ್ತೆ. ಅವನು ಮುಂದೆ ಚರ್ಚಿಗೆ ಸೇರುವುದಕ್ಕೋಸ್ಕರ ಅಧ್ಯಯನ ಮಾಡುತ್ತಿದ್ದಾನೆ.

**ಲಿಯೊನಾರ್ಡಾ :** ಓ, ಅದು ಬೇರೆ ಮಾಡುತ್ತಿದ್ದಾನೊ !

**ಆಗಟ್ :** ಮತ್ತೇನು, ಅತ್ತೆ ! ಬಿಷಪ್‌ನ ಸೋದರಳಿಯ ಅವನು. ಚರ್ಚಿಗೋಸ್ಕರ ಅಧ್ಯಯನ ಮಾಡುತ್ತಿದ್ದಾನೆ. ಅವನ ಪಕ್ಷಪಾತಕ್ಕೆ ಅದೇ ಕಾರಣ. ಆದರೆ ಆ ದಿವಸ ಅವನು ನಡೆದುಕೊಂಡ ರೀತಿ ಅವನ ಕಣ್ಣು ತೆರೆಯಿತು–ನಿಜವಾಗಿಯೂ ಅವನು ತುಂಬ ದಯಾಳು, ಅತ್ತೇ.

**ಲಿಯೊನಾರ್ಡಾ:** ಏಳೆ ಮೇಲೆ. ಇದೇನು ಅಧ್ವಾನ, ಮಂಡಿಯೂರಿ ಕೊಂಡು. ಎಲ್ಲಿ ಕಲಿತೆಯೆ ಈ ಚಾಲೋಕು ?

3

**ಅಗಟ್ :** (ಮೇಲೆದ್ದು) ನನಗೇ ಗೊತ್ತಿಲ್ಲ. ನಿನ್ನನ್ನು ನೋಡಿದರೆ ಹೆದರಿಕೆಯಾಗುತ್ತೆ ನನಗೆ. (ಅಳುವಳು.)

**ಲಿಯೊನಾರ್ಡಾ :** ಅದಕ್ಕೆ ನಾನೇನು ಮಾಡಲಿ? ನೋಡು ಮಗು, ಮೊದಲು ನನ್ನನ್ನು ಹೆದರಿಸಿದವಳು ನೀನು.

**ಅಗಟ್ :** ಇರಬಹುದು, ಅತ್ತೆ. ಆದರೆ ಎಲ್ಲವೂ ನೀನು ಅಂದು ಕೊಂಡಿರುವುದಕ್ಕಿಂತ ಬೇರೆಯೇ ಆಗಿದೆ. ಅವನು ಇನ್ನು ನಮಗೆ ಶತ್ರುವಲ್ಲ. ಆ ದಿವಸ ನಿನ್ನನ್ನು ಹಾಗಂದದ್ದಕ್ಕೆ ಅವನು ಮನಃಪೂರ್ತಿಯಾಗಿ ತನ್ನನ್ನು ತಾನೇ ನಿಂದಿಸಿಕೊಂಡಿದ್ದಾನೆ. ಇದು ಖಂಡಿತ ನಿಜ, ಅತ್ತೆ. ಅವನೇ ಹಾಗೆಂದದ್ದನ್ನು ನಾವೆಲ್ಲ ಕಿವಿಯಾರೆ ಕೇಳಿದ್ದೇವೆ. ಅದು ನನ್ನ ಕಿವಿಗೆ ಬೀಳಬೇಕೆಂದು ಅವನು ತಾನೇ ಅದನ್ನು ಇತರ ಜನರಿಗೆ ಹೇಳಿಕೊಂಡ; ಆಮೇಲೆ ಅವರಿಗೆ ಅವನು ಹೇಳುತ್ತಿದ್ದುದನ್ನು ನಾನೇ ಕೇಳಿದೆ; ಕಡೆಗೆ ಅವನೇ ಹಾಗೆಂದು ನನ್ನ ಹತ್ತಿರಲೂ ಹೇಳಿದ.

**ಲಿಯೊನಾರ್ಡಾ :** ಇದನ್ನೆಲ್ಲ ನನಗೆ ಏಕೆ ಬರೆದು ತಿಳಿಸಲಿಲ್ಲ?

**ಅಗಟ್ :** ಆದರೆ ನೀನು ಇತರರ ಹಾಗೆ ಇಲ್ಲವಲ್ಲ, ಅತ್ತೆ! ಅವನು ಅಲ್ಲಿ ಇದ್ದಾನೆ ಎಂದು ನಾನು ಸುಮ್ಮನೆ ಒಂದು ಸಣ್ಣ ಸೂಚನೆ ಕೊಟ್ಟಿದ್ದರೂ, ಕೂಡಲೆ ಮನೆಗೆ ಬಂದುಬಿಡಬೇಕು ಎಂದು ನೀನು ಬರೆದುಬಿಡುತ್ತಿದ್ದೆ. ನೀನು ಮಿಕ್ಕವರ ಹಾಗಲ್ಲ, ಅದು ನಿನಗೂ ತಿಳಿದಿರಬೇಕು.

**ಲಿಯೊನಾರ್ಡಾ :** ಆದರೆ, ಇಷ್ಟೆಲ್ಲ ನಡೆದದ್ದು ಹೇಗೆ? ನೀನು—

**ಅಗಟ್ :** ನಿನಗೆ ಗೊತ್ತಲ್ಲ, ಅತ್ತೆ – ಯಾರಾದರೂ ನಿನ್ನ ಗುಣಗಾನ ಮಾಡಿದರೆ, ಅವರು ನನ್ನ ಸ್ನೇಹಿತರಾಗುವುದಕ್ಕೆ ಅಷ್ಟು ಕಾರಣ ಸಾಕು. ಇಷ್ಟೆ ಸಾಲದು ಎಂದು, ಅನ್ಯಾಯವಾಗಿ ನಿನ್ನನ್ನು ಅವೊತ್ತು ಹಾಗೆ ಅಂದವನು ತಾನೇ ಇವೊತ್ತು ನಿನ್ನನ್ನು ಹೊಗಳುವನೆಂದರೆ – ಹೇಳಬೇಕೆ? ಅವೊತ್ತೆಲ್ಲ ನನ್ನ ಸಂತೋಷವೇ ಸಂತೋಷ. ಅದೇ ಆರಂಭ—

**ಲಿಯೊನಾರ್ಡಾ :** ಸರಿ. ಪೂರ್ತಿಕತೆಯನ್ನೆಲ್ಲ ಹೇಳು.

**ಅಗಟ್ :** ಅದು ಎಲ್ಲಿ ಆಗುತ್ತೆ, ಅತ್ತೆ! ಅದಕ್ಕೆ ಎಷ್ಟೊಂದು ದಿವಸ ಹಿಡಿಯುತ್ತೊ! – ಆದರೆ, ಇಷ್ಟು ಹೇಳಬಲ್ಲೆ – ಅದೇಕೆ ನನ್ನ ನರಗಳೆಲ್ಲ ಅಷ್ಟು ಅತಂತ್ರವಾದುವೋ ನಾನು ಬೇರೆ ಹೇಳಲಾರೆ!

**ಲಿಯೊನಾರ್ಡಾ**: ನಿನಗೆ ಹಾಗಾಯಿತು ಎಂದ ಕೂಡಲೆ, ಇಲ್ಲಿಗೇಕೆ ಹೊರಟು ಬಂದುಬಿಡಲಿಲ್ಲ?

**ಆಗಟ್**: ನಾನು ಮಾಡಿದ್ದೂ ಅದೇ. ಆದರೆ ಅದರಿಂದಲೇ ಉಳಿದ ದ್ದೆಲ್ಲ ಸಂಭವಿಸುವುದಕ್ಕೆ ಕಾರಣವಾಯಿತು.

**ಲಿಯೊನಾರ್ಡಾ**: ಅದು ಹೇಗೆ? ನಿಧಾನವಾಗಿ, ಸಮಾಧಾನವಾಗಿ, ಅನುಕ್ರಮವಾಗಿ, ಏನೇನು ನಡೆಯಿತೋ ಎಲ್ಲ ಹೇಳು.

**ಆಗಟ್**: ಸದ್ಯ, ಅಷ್ಟು ಹೇಳಿದೆಯಲ್ಲ! ನೀನು ಎಷ್ಟು ಒಳ್ಳೆಯವಳು, ಅತ್ತೆ! ದೇವರಾಣೆ, ಅತ್ತೆ—(ಅಳುವಳು.)

**ಲಿಯೊನಾರ್ಡಾ**: ಎಲ್ಲಿ - ಎಲ್ಲಿ! ಹೇಳು, ಮೊದಲಿಂದ ಕೊನೆವರೆಗೆ ಹೇಳು.

**ಆಗಟ್**: ಆಗಲಿ, ಅತ್ತೆ. ಸುಮಾರು ಒಂದು ವಾರ ಸ್ವಲ್ಪ ಮೈ ಬೆಚ್ಚಗಿತ್ತು-ಜ್ವರವೋ ಏನೋ ಎಂದುಕೊಂಡೆ-ಮಿಕ್ಕವರು ನನಗೆ ಏನಾಗಿದೆ ಎಂದು ಕೇಳುತ್ತಲೇ ಇದ್ದರು. ನಿಜವಾಗಿಯೂ ನನಗೇ ಗೊತ್ತಿರಲಿಲ್ಲ. ಆಮೊಂದು ಕೆಲವು ದಿವಸಗಳನ್ನು ಕುರಿತು ಹೇಳಬೇಕಾದ್ದೊ ಒಂದು ರಾಶಿ ಇದೆ - ಆದರೆ ಅದನ್ನೆಲ್ಲ ಅರ್ಥ ಮಾಡಿಕೊಳ್ಳುವುದು ನಿನಗೆ ಸಾಧ್ಯವಿಲ್ಲ.

**ಲಿಯೊನಾರ್ಡಾ**: ಉಂಟು, ನನಗೆ ಸಾಧ್ಯ.

**ಆಗಟ್**: ಇಲ್ಲ, ಬಹುಶಃ ಸಾಧ್ಯವಾಗಲಾರದು. ನನಗಾದರೂ ಸಾಧ್ಯವಾಗುತ್ತಿಲ್ಲ. ಅಯ್ಯೋ, ಆಗಿನ ನನ್ನ ದೀನಾವಸ್ಥೆಯನ್ನು ಜ್ಞಾಪಿಸಿ ಕೊಂಡರೆ, ಈಗ ಎಷ್ಟೋ ಸುಖವಾಗಿದ್ದೇನೆ.

**ಲಿಯೊನಾರ್ಡಾ**: ಸರಿ, ಇನ್ನೊಮ್ಮೆ ಹೇಳುವೆಯಂತೆ. ಆದರೆ, ಇದೆಲ್ಲ ಒಂದು ತುದಿಗಟ್ಟಿ ಮುಟ್ಟಿದ್ದು ಹೇಗೆ?

**ಆಗಟ್**: ಅವನೇ ನೇರವಾಗಿ - ನನ್ನನ್ನು ಮಾತನಾಡಿಸಿದ!

**ಲಿಯೊನಾರ್ಡಾ**: ಮದುವೆ ಮಾಡಿಕೊಳ್ಳುತ್ತೇನೆ ಎಂದನೆ?

**ಆಗಟ್**: ಹೌದು. ಓ, ಅದು ಜ್ಞಾಪಿಸಿಕೊಂಡರೇನೇ ಈಗಲೂ ಮುಖವೆಲ್ಲ ಕೆಂಪೇರುತ್ತದೆ.

**ಲಿಯೊನಾರ್ಡಾ**: ನೀನು ಪೆಚ್ಚಾದೆ ತಾನೆ?

**ಆಗಟ್ :** ನಾನು ಏನಾದೆನೋ ನನಗೇ ತಿಳಿಯದು.

**ಲಿಯೊನಾರ್ಡಾ:** ನೀನು ಏನು ಮಾಡಿದೆ?

**ಆಗಟ್ :** ಒಂದು ಕಿರ್ರೋ ಎಂದು ಕಿರಿಚಿದ್ದೇ–ಓಡಿದೆ; ಮನೆಗೆ ಓಡಿ, ಟ್ರಂಕು ಮೂಟೆ ಕಟ್ಟಿ, ದೋಣಿಯನ್ನು ಹತ್ತಿ, ಆದಷ್ಟು ಶೀಘ್ರ ಹೊರಟೇಬಿಟ್ಟೆ.

**ಲಿಯೊನಾರ್ಡಾ:** ಅಷ್ಟೇಯೊ?

**ಆಗಟ್ :** ಅಷ್ಟೇ ಎನ್ನುತ್ತೀಯಾ? ಇಷ್ಟೆಲ್ಲಾ ನಡೆದದ್ದು ಮನೆಯಿಂದ ಹೊರಗೆ, ಅಷ್ಟೊಂದು ಜನಗಳ ನಡುವೆ!

**ಲಿಯೊನಾರ್ಡಾ:** ಆಗಟ್!

**ಆಗಟ್ :** ಅದು ಎಷ್ಟು ಅನಿರೀಕ್ಷಿತವಾಗಿ ನಡೆಯಿತೆಂದು ಜ್ಞಾಪಿಸಿ ಕೊಂಡರೇ ಭಯವಾಗುತ್ತದೆ. ನನ್ನ ಜನ್ಮದಲ್ಲಿ ನನಗೆ ಅಷ್ಟು ಭಯವಾಗಿರ ಲಿಲ್ಲ–ಆಮೇಲೆ ನನಗೇ ತುಂಬ ನಾಚಿಕೆಯಾಯಿತು. ದೋಣಿಯಲ್ಲಿ ದಾರಿಯುದ್ದಕ್ಕೂ ಅಳುವುದೊಂದೇ ನನಗೆ ಕೆಲಸವಾಗಿತ್ತು.

**ಲಿಯೊನಾರ್ಡಾ:** ಆದರೆ ಅವನು ಅದೇ ದೋಣಿಯಲ್ಲೆ ಬಂದಿರ ಬೇಕಲ್ಲವೆ?

**ಆಗಟ್ :** ನೋಡು ಮತ್ತೆ! ಹಡಗು ಭೂಶಿರದ ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ಬಳಸಿಬರುವ ವೇಳೆಗೆ ನೆಲಮಾರ್ಗವಾಗಿ ದಾಟಿಕೊಂಡು ಬಂದು ಆಚೆ ಕಡೆ ಹಡಗನ್ನು ಹತ್ತಿದ. ಅವನು ನನ್ನ ಕಣ್ಣೆದುರಿಗೆ ಬಂದು ನಿಲ್ಲುವ ವರೆಗೂ ನನಗೇನೂ ಗೊತ್ತೇ ಆಗಲಿಲ್ಲ. ನನಗೋ–ದೋಣಿಯ ನೆಲ ಕಳಚಿ ಎಲ್ಲಿ ಬೀಳುತ್ತೇನೋ ಎನ್ನಿಸಿತು. ಆಗ ಓಡಿಹೋಗಿಬಿಡೋಣ ಎನ್ನಿಸಿತು. ಆದರೆ–ಅತ್ತೆ, ನನ್ನ ಕೈಲಾಗಲಿಲ್ಲ! ಅವನು ನನ್ನ ಕಡೆ ನೋಡಿದ, ಓ ಎಂಥ ಅದ್ಭುತವಾದ ದೃಷ್ಟಿ ಅವನದು! ಮತ್ತೆ ನನ್ನ ಕೈಗಳನ್ನು ಹಿಡಿದು ಕೊಂಡ. ನನ್ನನ್ನು ಮಾತಾಡಿಸಿದ, ಆದರೆ ಅವನು ಏನು ಹೇಳಿದನೋ ನಾ ಕಾಣೆ; ಎಲ್ಲವೂ ಸುತ್ತ ಸುತ್ತ ಭ್ರಮಿಸುತ್ತಿರುವ ಹಾಗೆನ್ನಿಸಿತು. ಅವನ ಕಣ್ಣುಗಳೋ, ಏನು ಹೇಳಲಿ, ಅತ್ತೆ! ಆಃ, ನೀನು ಅವುಗಳನ್ನು ನೋಡ ಲಿಲ್ಲ; ಅದಕ್ಕೇ ಹಾಗೆ–ನೀನು–

**ಲಿಯೊನಾರ್ಡಾ:** ಇಲ್ಲ, ಮಗು.

**ಆಗಟ್ :** ಅವನು ಸುಮ್ಮನೆ ಎದುರಿಗಿದ್ದರೆ ಸಾಕು, ಅದು ಏನೋ ಅಲ್ಲಿ ಒಂದು ಸಾಚಾತನ. ಅವನು ನನ್ನ ಕಡೆ ನೋಡಿ, "ನನಗೆ ನಿನ್ನಮೇಲೆ ತುಂಬ ಪ್ರೀತಿ" ಎಂದಾಗ – ಅಂದರೆ ಅಷ್ಟನ್ನೂ ಮಾತು ಜೋಡಿಸಿ ಹೇಳುತ್ತಾನೆ ಎಂದಲ್ಲ – ಆದರೆ ಅಂತೂ ಹಾಗೆಂದಾಗ – ಮೈಯೆಲ್ಲ ಜುಮ್ಮೆನ್ನುತ್ತದೆ. ಎಲ್ಲಿ, ಒಂದು ಮುತ್ತು ಕೊಡು, ಅತ್ತೆ! ಹ್ಞಾ, ಹಾಗೆ! ಅತ್ತೆ, ಇವೊತ್ತು ಅವನು ಏನು ಹೇಳಿದ ಗೊತ್ತೆ?

**ಲಿಯೊನಾರ್ಡಾ :** ಇಲ್ಲ.

**ಆಗಟ್ :** ಹೀಗೆ ನನ್ನಂಥ ಹುಡುಗಿಯನ್ನು ಲಾಲಿಸಿ ಪಾಲಿಸಿ ಮಾಡಿರುವ ಆಕೆ – ಅವನು ಅದೇ ಪದಗಳನ್ನು ಉಪಯೋಗಿಸಿದ – ಅವೆಲ್ಲ ಘನವಾದ ಅರ್ಥಪೂರ್ಣವಾದ ಪದಗಳು – ಅದಕ್ಕೆ ಕಾರಣ ಮತಧರ್ಮವ್ಯಾಸಂಗದಲ್ಲಿ ನಿರತನಾಗಿರುವುದೇ – ಅವನು ಹೇಳಿದ – ಇಂಥ ಹುಡುಗಿಯನ್ನು – ಹುಡುಗಿಯೆಂದರೆ ನಾನೇ, ಅತ್ತೆ – ಅವನು ಹಾಗೆಂದಾಗ ನನ್ನ ದೋಷಗಳೆಲ್ಲ ನನಗೆ ಜ್ಞಾಪಕ ಬಂತು – ಆದರೆ ಇಷ್ಟರಲ್ಲಿಯೇ ಅವನಿಗೇ ಪರಿಚಯವಾಗುತ್ತದಲ್ಲ –

**ಲಿಯೊನಾರ್ಡಾ :** ಸರಿ, ಮುಂದೆ? ನಿನ್ನಂಥ ಹುಡುಗಿಯನ್ನು ಲಾಲಿಸಿ ಪಾಲಿಸಿದ ಆಕೆ—?

**ಆಗಟ್ :** ಆಕೆ – ಆಕೆಗೆ ಸಮನಾದ ಹೆಂಗಸು ಎಲ್ಲೂ ಇಲ್ಲ ಎಂದ.

**ಲಿಯೊನಾರ್ಡಾ :** ನೀನು ನನ್ನನ್ನು ಸೊಗಸಾಗಿ ಹೊಗಳುತ್ತಿದ್ದಿರಬೇಕು.

**ಆಗಟ್ :** ಎಂದಿಗೂ ಇಲ್ಲ. ಅದಕ್ಕೆ ಬದಲು,—ಇದೆಲ್ಲಾ ಆಮೇಲೆ ಆಯಿತು. ನನಗಿಂತ ಮುಂಚಿತವಾಗಿ ಮೊತ್ತಮೊದಲು ತಾನೇ ಬಂದು ಎಲ್ಲವನ್ನೂ ನಿನಗೆ ತಿಳಿಸುವುದು ತನ್ನ ಕರ್ತವ್ಯವೆಂದು ಹೇಳಿದ. ನಿನ್ನ ಪ್ರತಿಕ್ರಿಯೆಯ ಮೊದಲನೆಯ ಧಕ್ಕೆಯನ್ನು ತಾನು ಎದುರಿಸುವೆನೆಂದು ಹೇಳಿದ. "ಬೇಡ, ಬೇಡ. ನೀನು ಅವಳನ್ನು ಚೆನ್ನಾಗಿ ಕಾಣೆ. ಅವಳು ನಿನ್ನನ್ನು ನೆರಿಕಿಹಾಕಿಬಿಡುತ್ತಾಳೆ" ಎಂದೆ.

**ಲಿಯೊನಾರ್ಡಾ :** ಓ, ಆಗಟ್!

**ಆಗಟ್ :** ಆಗಲೇ ಅವನು ಹೇಳಿದ್ದು – "ಇಲ್ಲ. ಇಂತಹ ಹುಡುಗಿಯನ್ನು ಲಾಲನೆ ಪಾಲನೆ ಮಾಡಿದ ಆಕೆ – " ಇತ್ಯಾದಿ, ಇತ್ಯಾದಿ ಈಗ ನೋಡು, ಅವನನ್ನು ಹೇಗೆ ಹೆದರಿಸಿದ್ದೀಯೆ.

**ಲಿಯೊನಾರ್ಡಾ:** ಬೆಳಗಿನಿಂದ ಏನೋ ಪೇಚಾಟ ನನಗೆ – ನಾನು ಏನೋ ತಪ್ಪು ತಿಳಿದುಕೊಂಡೆ—

**ಆಗಟ್ :** ಇನ್ನು ಮೇಲೆ ನಿನಗೇನೂ ಪೇಚಾಟವಿರುವುದಿಲ್ಲ. ಏಕೆಂದರೆ, ಜನ ದಯಾಳುಗಳು. ಪುನಃ ನೀನು ಅವರ ಮಧ್ಯೆ ಓಡಿಯಾಡುವೆ. ನೀನು ಇಷ್ಟು ಒಳ್ಳೆಯವಳಾದವಳು—

**ಲಿಯೊನಾರ್ಡಾ:** ಅಲ್ಲ, ನಾನು ಮಾತ್ರ ಅಂಥವಳಲ್ಲ.

**ಆಗಟ್ :** ನೀನೆ? ನಿನ್ನನ್ನು ಅರ್ಥ ಮಾಡಿಕೊಳ್ಳುವುದು ಮಾತ್ರ ತುಂಬ ಕಷ್ಟ, ಅತ್ತೆ!—ಓ, ನಿನ್ನ ತೊಂದರೆ ಏನು, ಅತ್ತೆ?

**ಲಿಯೊನಾರ್ಡಾ:** ನನ್ನ ಮನಸ್ಸಿಗೆ ನೆಮ್ಮದಿಯಿಲ್ಲ, ಆಗಟ್.

**ಆಗಟ್ :** ಏಕೆ, ಅತ್ತೆ, ನನ್ನ ವಿಷಯವಾಗಿಯೆ ?

**ಲಿಯೊನಾರ್ಡಾ:** ನೀನು ನನ್ನ ಬದುಕಿಗೆ ಹಗಲುಬೆಳಕು; ನಿನ್ನಿಂದ ನನ್ನ ಬದುಕಿಗೆ ಬೆಳಕು ಬಂದಿದೆ, ಹಿತ ಬಂದಿದೆ, ಮೃದುತ್ವ ಬಂದಿದೆ.—ಆದರೆ ಅದೇ ಕಾರಣವಾಗಿ—

**ಆಗಟ್ :** ಅದೇ ಕಾರಣವಾಗಿಯೆ ? ಅತ್ತೆ, ನೀನು ಹೇಳುವುದು ಅರ್ಥವಾಗುತ್ತಿಲ್ಲ.

**ಲಿಯೊನಾರ್ಡಾ:** ನಾನು ಒಡ್ಡೊಡ್ಡು; ನನ್ನದು ಕಟುಸ್ವಭಾವ, ನನ್ನದು ತುಂಬ ಅನುಮಾನದ ಪ್ರಕೃತಿ;—ನನ್ನ ಚಾಳಿ ದುಷ್ಟ. ನಾನು ಒಂದು ಕಾಡುಹೆಂಗಸು, ನನಗೆ ಆತ್ಮಸಂಯಮವೆಂಬುದು ಎಂದೂ ಇಲ್ಲ. ಅವನ ಕಣ್ಣಿಗೂ, ಈಗ ನಿನ್ನ ಕಣ್ಣಿಗೂ ನಾನು ಏನೆಂದು ಕಾಣಬೇಕು? ಹೇಳು! ನಾನು ಒಡ್ಡು! ನಾನು ಅವಲಕ್ಷಣ!—

**ಆಗಟ್:** ನಿನ್ನಷ್ಟು ಮಧುರ ಸ್ವಭಾವದ ಹೆಂಗಸು ಪ್ರಪಂಚದಲ್ಲಿ ವಿರಳ. ಯಾವುದಕ್ಕೂ ಸಗ್ಗದ ನಿನ್ನ ಧೈರ್ಯ, ನಿನ್ನ ಶಕ್ತಿ, ನಿನ್ನ ಉತ್ಸಾಹ—

**ಲಿಯೊನಾರ್ಡಾ:** ಇಲ್ಲ, ಇಲ್ಲ. ನನಗೆ ನಿಜ ಹೇಳು. ನಿಜವನ್ನು

ಹೇಳುವುದೆ ನನಗೆ ತಕ್ಕದ್ದು. ಏಕೆಂದರೆ, ನಿನಗೋಸ್ಕರ ಎಲ್ಲವನ್ನೂ ತೊರೆದು, ಎಂಟು ವರ್ಷಗಳಿಂದಲೂ ನನ್ನ ವ್ಯವಹಾರವೆಲ್ಲ ಕೂಲಿ ಕೆಲಸಗಾರರೊಡನೆ ಆಗಿದೆ. ನನಗಿರುವ ಆಸ್ತಿಯೆಲ್ಲ ನಿನ್ನದೇ. ಆದ್ದರಿಂದ, ನನಗೆ ಸ್ವಲ್ಪ ಗೌರವ ತೋರಿಸು, ಆಗಟ್. ನಿಜ ಹೇಳು—ನಾನು ಇದಲ್ಲವೆ? ಹೇಗೆ ಹೇಳಲಿ? ನಾನು ಏನಾಗಿದ್ದೇನೆ, ಹೇಳು.

**ಆಗಟ್ :** ನೀನು ದೇವರಂಥವಳು.

**ಲಿಯೊನಾರ್ಡ್ಡಾ:** ಎಂದಿಗೂ ಅಲ್ಲ. ನನಗೂ ಎಂಟು ವರ್ಷ ಪ್ರಪಂಚದಲ್ಲಿ ಎಲ್ಲವನ್ನೂ ತೊರೆದು ಇಲ್ಲಿ ತಲೆ ಮರೆಸಿಕೊಂಡಿದ್ದೇನೆ ಎಂಬುದು ಇದುವರೆಗೆ ಹೊಳೆದಿರಲಿಲ್ಲ. ಪ್ರಪಂಚದಲ್ಲಿ ನಡೆಯುತ್ತಿರುವ ಮಹತ್ತಾದ ಬದಲಾವಣೆಗಳ ವಿಷಯ ಓದಿದರೂ ನನ್ನ ಮನಸ್ಸಿಗೆ ಒಂದೂ ಹತ್ತಿರಲಿಲ್ಲ. ನಾನು ಓದಿ ಮನಸ್ಸಿನಲ್ಲಿ ಯೋಚಿಸಿಕೊಂಡಿದ್ದ ಪ್ರಪಂಚವೇ ಬೇರೆ, ವಾಸ್ತವ ಪ್ರಪಂಚವೇ ಬೇರೆ. ವಾಸ್ತವಪ್ರಪಂಚದ ಮೊದಲ ಸಂಪರ್ಕವಾದೊಡನೆಯೇ ನಾನು ಓದಿದ್ದು, ಚಿಂತೆ ಮಾಡಿದ್ದು, ಮನನ ಮಾಡಿದ್ದು—ಎಲ್ಲವೂ ಮಂಗಮಾಯವಾಗುತ್ತೆ. ಈಗ ನೋಡಿದರೆ, ನೀನು ಅಂದವಾಗಿ ಧರಿಸಿರುವ ಹೊಸ ಉಡುಪು, ಟೋಪಿ, ಮುಂತಾದವುಗಳು, ಅವುಗಳ ವಿಚಿತ್ರವಾದ ರಂಗುಗಳು, ಅವುಗಳ ಹೊಂದಾಣಿಕೆ—ಇವುಗಳಲ್ಲೆಲ್ಲ ನನಗೆ ಹೊಸ ಹೊಸ ಸೊಬಗು ಕಾಣುತ್ತಿದೆ. ಇವುಗಳಲ್ಲೆಲ್ಲ ಏನೋ ಸ್ವಾರಸ್ಯವಿರಬೇಕು. ನನಗೆ ಮಾತ್ರ ಅರ್ಥವಾಗುವುದಿಲ್ಲ. ನೀನಿದ್ದ ಕಡೆ ಒಂದು ಆಮೋದ, ಒಂದು ವಿಧವಾದ ನವಯೌವನದ ಕಳೆ ತುಂಬಿರುತ್ತದೆ. ನಿನ್ನ ಕೋಮಲಸ್ವಭಾವ ನಾಜೋಕಿನಿಂದಲೂ ನವಚೈತನ್ಯದಿಂದಲೂ ಕೂಡಿರುತ್ತವೆ. ನಾನಿದ್ದ ಕಡೆ, ಪ್ರತಿಯೊಂದೂ ಪುರಾತನ ಕಾಲಕ್ಕೆ ಸೇರಿದ ಹಾಗಿದೆ. ಪ್ರತಿಯೊಂದರಲ್ಲೂ ಏನೋ ಭಾರ ತುಂಬಿರುವ ಹಾಗಿದೆ; ಎಲ್ಲವೂ ಶಿಥಿಲವಾಗಿರುವಂತೆ ತೋರುತ್ತದೆ.—ಎಲ್ಲ ರೀತಿಯಲ್ಲೂ ನನ್ನ ಬಾಳು ಹೀಗಾಗಿದೆ

**ಆಗಟ್ :** ನನ್ನ ಮಾತಿನಲ್ಲಿ ನಿನಗೆ ನಂಬಿಕೆಯಿಲ್ಲದ್ದರಿಂದ ಅವನು ನಿನ್ನ ವಿಷಯವಾಗಿ ಆಡಿದ್ದನ್ನು ಹೇಳುತ್ತೇನೆ.

**ಲಿಯೊನಾರ್ಡ್ಡಾ:** ಆದರೆ, ನನ್ನ ವಿಷಯ ಅವನಿಗೆ ಏನೂ ಗೊತ್ತಿಲ್ಲವಲ್ಲ!

**ಆಗಟ್ :** ಇಲ್ಲ. ನಿನ್ನ ವಿಷಯವನ್ನು ಪರೋಕ್ಷವಾಗಿ ಪ್ರಸ್ತಾಪಿಸಿದ. ನನ್ನ ಪರಿಚಯ ಸ್ವಲ್ಪ ವಿಶೇಷವಾಗಿ ಆದಮೇಲೆ ನನ್ನನ್ನು ನೋಡುತ್ತಾ, ನನ್ನ ಮೂಲಕ ನಿನ್ನನ್ನು ಅವನು ಕಂಡುಹಿಡಿದನಂತೆ! ಆದ್ದರಿಂದ ಮತ್ತಾರಿಗಿಂತಲೂ ಹೆಚ್ಚಾಗಿ ನಿನ್ನ ಗುರುತು ಪರಿಚಯಗಳನ್ನು ಮಾಡಿಕೊಳ್ಳಬೇಕೆಂದು ಅವನಿಗೆ ಕುತೂಹಲ ಹುಟ್ಟಿದೆಯಂತೆ! ಹೀಗೆಂದು ಇದೇ ಮಾತುಗಳನ್ನು ಉಪಯೋಗಿಸಿದ ಅವನು. ಇಂಥ ಸಂದರ್ಭದಲ್ಲಿ—ಇದು ವಿಚಿತ್ರ!

**ಲಿಯೊನಾರ್ಡ:** ಸಾಕು, ನಿಲ್ಲಿಸು. ಇನ್ನು ನಾನು ಕೇಳಲಾರೆ. ಅಂಥವನ ವಿಷಯದಲ್ಲಿ ನಾವು ಹೇಗಾಡಿದೆವೆಂದು—

**ಆಗಟ್ :** ಅಷ್ಟು ದ್ವೇಷಿಸಿದೆವಲ್ಲ! ವಿಚಿತ್ರ!

**ಲಿಯೊನಾರ್ಡ:** ಅದೂ, ನನ್ನನ್ನು ಬಿಟ್ಟು ನೀನು ಹೊರಗೆ ಹೋದ ಮೊದಲನೆಯ ಬಾರಿಗೆ!

**ಆಗಟ್ :** ಹೌದು!

**ಲಿಯೊನಾರ್ಡ:** ಅವನೊಡನೆ ರಾಜಿ ಮಾಡಿಕೊಂಡು, ಅವನನ್ನು ಪ್ರೀತಿಸುತ್ತ ಕಳೆ ತುಂಬಿಕೊಂಡು ಹಿಂದಕ್ಕೆ ಬಂದಿದ್ದೀಯೆ!

**ಆಗಟ್ :** ಇದಕ್ಕೆಲ್ಲ ಮೂಲಕಾರಣ ಯಾರು ಹೇಳು. ನೋಡೋಣ. ಇಲ್ಲಿ ವಾಸಮಾಡಿಕೊಂಡು ನಿನ್ನ ಜೀವನ ಒಡ್ಡೊಡ್ಡಾಗಿ, ನೀನು ವಿಲಕ್ಷಣವಾಗಿದ್ದೀಯೆ ಎಂದರೆ ಯಾರು ಒಪ್ಪಬೇಕು? ನನ್ನಂತಹ ವಿಜಯಲಕ್ಷ್ಮಿಯನ್ನು ಸೃಷ್ಟಿಸಿದ ನೀನು ಒಡ್ಡೆ? ನೀನು ವಿಲಕ್ಷಣವೆ?

**ಲಿಯೊನಾರ್ಡ:** ನೀನು ನನ್ನೊಡನೆ ಇರುವಾಗ, ನಾನು ನಿನ್ನನ್ನು ನೋಡುತ್ತಿರುವಾಗ—ನಿನ್ನ ಮಾತು ಕೇಳುತ್ತಿರುವಾಗ—ನಾನು ಗೊಣಗುವುದಿಲ್ಲ; ಮತ್ತು ನಿನ್ನನ್ನು ಕಂಡು ಕರುಬುವುದೂ ಇಲ್ಲ. ಇದಕ್ಕೆ ನಾನು ಮಾಡಿದ ತ್ಯಾಗವೆಲ್ಲ ಸಾರ್ಥಕವೆ! ಏನೋ ಅವಜ್ಞತೆಯಿಂದ, ಏನೋ ಸ್ವಾರ್ಥ ದೃಷ್ಟಿಯಿಂದ ನಾನು ಅತಿಯಾದ ತ್ಯಾಗ ಮಾಡಿದೆನೆಂದಿದ್ದೆ—ಅದು ತಪ್ಪು. ಏನೇ ಆದರೂ ನೀನು ಪ್ರಥಮಪ್ರಾಯದಲ್ಲಿದ್ದೀಯೆ. ನಾನಾದರೋ—

**ಆಗಟ್ :** ನೀನೆ? ಏನು ಕಡಮೆ ನಿನಗೆ?

**ಲಿಯೊನಾರ್ಡಾ**: ನನ್ನ ಬದುಕು ಮುಗಿಯುತ್ತಾ ಬಂತು ಎನ್ನಿಸುತ್ತಿದೆ.

**ಆಗಟ್**: ನಿನ್ನ ಬದುಕು ಮುಗಿಯುತ್ತಾ ಬಂತೆ? ನೀನು ಹಾಗೆ ಹೇಳಿದರೆ, ಬಲು ಸಂಕಟವಾಗುತ್ತೆ, ಅತ್ತೆ.

**ಲಿಯೊನಾರ್ಡಾ**: ನನಗೇನೋ ಸಂತೋಷ. ಬಹಳ ಸಂತೋಷ—ಈಗ ನಡೆದಿದ್ದನ್ನೆಲ್ಲಾ ನೋಡಿದರೆ! ನಿಜವಾಗಿಯೂ ಹೇಳುತ್ತೇನೆ. ಆದರೂ ನಿನಗೆ ಗೊತ್ತಿಲ್ಲವೆ?—

**ಆಗಟ್**: ನನಗೆ ಗೊತ್ತಿರುವುದು ಇಷ್ಟು. ನನಗೆ ಸ್ವಲ್ಪವೂ ಅರ್ಥವಾಗದ ಹಾಗೆ ನೀನೇನೋ ತುಂಬಾ ಬದಲಾಯಿಸಿಬಿಟ್ಟಿದ್ದೀಯೆ!

**ಲಿಯೊನಾರ್ಡಾ**: ಹೋಗು ಆಗಟ್—ಅವನನ್ನು ಹಿಂತಿರುಗಿ ಕರೆದುಕೊಂಡು ಬಾ.

**ಆಗಟ್**: ಎಷ್ಟು ಇಂಪಾಗಿವೆ ಆ ಮಾತುಗಳು! ಅವನನ್ನು ಹಿಂತಿರುಗಿ ಕರೆದುಕೊಂಡು ಬಾ! (ಏಳುವಳು. ಹಾಗೆಯೇ ಸ್ವಲ್ಪ ನಿಂತು) ವಂದನೆಗಳು, ಅತ್ತೆ, ನನ್ನ ಪ್ರೀತಿಯ ಪ್ರಿಯಳಾದ ಅತ್ತೆ! (ಹೊರಗೆ ಓಡಿಹೋಗುವಳು. ಲಿಯೊನಾರ್ಡಾ ಮೇಜಿನ ಪಕ್ಕದಲ್ಲಿರುವ ಒಂದು ಕುರ್ಚಿಯ ಮೇಲೆ ಕುಳಿತುಕೊಂಡು ತನ್ನ ಕೈಗಳಿಂದ ಮುಖವನ್ನು ಮುಚ್ಚಿಕೊಳ್ಳುವಳು. ಹೊರಗಡೆ ಆಗಟ್‌ಸ ಧ್ವನಿ ಕೇಳುವುದು.) "ಬಾ ಇಲ್ಲಿಗೆ–" (ಹಾಗ್‌ಬಾರ್ಸ್ವಿನ ಪ್ರತಿಧ್ವನಿ ಕೇಳುವುದು) "ನಿಜವೆ ಅದು?"

**ಆಗಟ್**: (ಹಾಗ್‌ಬಾರ್ಸ್ವನೊಡನೆ ಹಿಂದಕ್ಕೆ ಬಂದು) ಬಾ, ಒಳಕ್ಕೆ ಬಾ, (ಲಿಯೋನಾರ್ಡಾ ಕುರ್ಚಿಯಿಂದ ಮೇಲಕ್ಕೆದ್ದು–ಕಣ್ಣುಗಳನ್ನು ಒರಸಿಕೊಂಡು–ಹಸನ್ಮುಖದಿಂದ ಅವರಲ್ಲಿಗೆ ಬರುವಳು) ಅತ್ತೆ, ಇದೋ ನೋಡಮ್ಮ, ಬಂದಿದಾನೆ!

**ಹಾಗ್‌ಬಾರ್ಸ್ವ**: ಮಿಸಸ್ ಫಾಲ್ಕ್–!

**ಲಿಯೊನಾರ್ಡಾ**: ನನ್ನನ್ನು ಕ್ಷಮಿಸು.

**ಹಾಗ್‌ಬಾರ್ಸ್ವ**: ಏನು? ಅಲ್ಲ.–ಹಾಗಲ್ಲ–ನೀವು ನನ್ನನ್ನು ಕ್ಷಮಿಸಬೇಕು. ನಿಮ್ಮ ಕ್ಷಮಾಪಣೆಯನ್ನು ಕೇಳಲು ಇದುವರೆವಿಗೂ ಆಗಿರಲಿಲ್ಲ–ನಾನು—,

**ಆಗಟ್**: ಅದನ್ನೆಲ್ಲಾ ಬೇರೆ ಸಮಯದಲ್ಲಿ ಮಾತಾಡೋಣ. ಈಗ

ಅತ್ತೆ ನಿನ್ನನ್ನು ನೋಡಲಿ !

**ಲಿಯೊನಾರ್ಡಾ:** ನಿಮ್ಮನ್ನು ನೋಡಿದರೆ ನಿಮ್ಮ ಅನ್ಯೋನ್ಯ ಮನ ದಾಸೆಗಳಿಗೆ ಯಾವ ಕುಂದಕವೂ ಬರದೆಂದು ಕಾಣುತ್ತೆ – !

**ಆಗಟ್ :** ಅತ್ತೆ – ಎಂತಹ ಸವಿ ಮಾತುಗಳನ್ನು ಹೇಳಿದೆ !

**ಲಿಯೊನಾರ್ಡಾ:** ಚೆನ್ನಾಗಿ ಗೊತ್ತಾಗುತ್ತೆ. ಹೌದು ! ನೀವಿಬ್ಬರೂ ಅನ್ಯೋನ್ಯ ಪ್ರೇಮಿಗಳಾಗಿದ್ದೀರಿ ! ಸಂತೋಷವನ್ನು ಕಾಣದ ಈ ಮನೆಗೆ ಜೀವಕಳೆ ತುಂಬಿ, ಜೀವನ ಸೊಬಗಿನ ಕಳಕಳಿಸುವ ನಾನಾ ಬಣ್ಣಗಳಿಂದ ಕಂಗೊಳಿಸುವಂತೆ ಮಾಡಿ. ನಿಮ್ಮ ಸೌಂದರ್ಯಾನಂದಗಳಿಂದ ಈ ಮನೆ ಬೆಳಗಲಿ !

**ಆಗಟ್ :** ಆಹಾ ! ಅತ್ತೆ !

**ಲಿಯೊನಾರ್ಡಾ:** ಇನ್ನೂ ಅವಳಿಗೆ ಮುತ್ತು ಕೊಟ್ಟಿಲ್ಲವೆ ? (ಆಗಟ್ ಅವನನ್ನು ಬಿಟ್ಟು ಸ್ವಲ್ಪ ಸರಿಯುವಳು.) ಆಗಲಿ, ಮುತ್ತು ಕೊಡು. – (ಅವರಿಬ್ಬರೂ ಆಲಿಂಗನ ಮಾಡಿಕೊಳ್ಳುವರು.)

**ಆಗಟ್ :** (ಲಿಯೊನಾರ್ಡಾ ಹತ್ತಿರ ಬಂದು) ಏನು ಅತ್ತೆ, ಅಳುತ್ತಿದ್ದೀಯಾ ?

**ಲಿಯೊನಾರ್ಡಾ:** ನನ್ನ ವಿಷಯ ಮನಸ್ಸಿಗೆ ಹಚ್ಚಿಕೊಳ್ಳಬೇಡ – ಈ ವಿಷಯವನ್ನು ನಿನ್ನ ಸೋದರಮಾವ, ಬಿಷಪ್ಪಿಗೆ ತಿಳಿಸಿದ್ದೀಯಾ ?

**ಹಾಗ್ ಬಾರ್ಟ್ :** ಇನ್ನೂ ಇಲ್ಲ.

**ಲಿಯೊನಾರ್ಡಾ:** ಹೇಳಿಲ್ಲವೇ ಇನ್ನೂ ? ಹಾಗಾದರೆ ಬಹಳ ಕಷ್ಟ ಸಾಧ್ಯವಾದ ಭಾಗ ಮುಂದೆ ಕಾದಿದೆ ನಿಮಗೆ.

**ಹಾಗ್ ಬಾರ್ಟ್ :** ಹಾಗಲ್ಲ – ಇಲ್ಲಿಯ ತನಕ ಮುಂದುವರಿದದ್ದು ಆಯಿತು. ಇನ್ನು ಮೇಲೆ ಯಾವ ಅಡ್ಡಿಯನ್ನೂ ನಾನು ಲೆಕ್ಕಿಸುವುದಿಲ್ಲ !

**ಆಗಟ್ :** ಕೇಳಿದೆಯಾ ಆ ಮಾತನ್ನು, ಅತ್ತೆ — ?

(ತೆರೆ ಬೀಳುವುದು.)

# ಎರಡನೆಯ ಅಂಕ

[ಬಿಷಪ್‌ನ ಮನೆಯಲ್ಲಿ ಒಂದು ಕೊಠಡಿ, ಕೆಲವು ವಾರಗಳ ಅನಂತರ. ಕೊಠಡಿಯ ಹಿಂಬದಿಯ ಬಾಗಿಲು ಇನ್ನೊಂದು ಕೊಠಡಿಗೆ ತೆರೆಯುತ್ತದೆ. ಬಲಗಡೆಯ ಗೋಡೆಯ ಮೇಲೆ ಇನ್ನೊಂದು ಬಾಗಿಲು; ಎಡಗಡೆಯದರಲ್ಲಿ ಕಿಟಕಿಗಳು. ಒಂದು ಕಿಟಕಿಯ ಬಳಿ, ತಕ್ಕಮುಟ್ಟಿಗೆ ಮುಂದುಗಡೆ, ಒಂದು ದೊಡ್ಡ ವಿರಾಮಕುರ್ಚಿ. ಬಲಗಡೆ ಬಾಗಿಲು ಹತ್ತಿರ, ಒಂದು ಸೋಫ, ಗೋಡೆಯ ಉದ್ದಕ್ಕೂ ಕುರ್ಚಿಗಳು. ಹಿಂದುಗಡೆಯ ಬಾಗಿಲ ಆಚೆ ಈಚೆ ಕುರ್ಚಿಗಳ ಸಾಲು. ಬಿಷಪ್ ಸೋಫದ ಮೇಲೆ ಕುಳಿತು, ಹಾಗ್‌ಬಾರ್ಟ್ ಜೊತೆಗೆ ಮಾತನಾಡುತ್ತಿದ್ದಾನೆ.]

**ಬಿಷಪ್ :** ಇಲ್ಲಿ ನೋಡು ಹಾಗ್‌ಬಾರ್ಟ್, ನಿನ್ನ ದೃಢ ನಂಬಿಕೆಯಂತೆ ನೀನು ನಡೆದುಕೊಂಡಿದ್ದೀಯೆಂದು ಪುನಃ ಪುನಃ ಹೇಳುತ್ತಿದ್ದೀಯೆ ಹಾಗೇ ಆಗಲಿ; ನನ್ನ ದೃಢ ನಂಬಿಕೆಯಂತೆ ನಾನು ನಡೆದುಕೊಳ್ಳಲು ಅಡ್ಡಿ ಮಾಡ ಬೇಕೆಂದಿದ್ದೀಯೇನು ?

**ಹಾಗ್‌ಬಾರ್ಟ್ :** ನಾನು ಹೇಳುವುದೆಲ್ಲಾ ಒಂದೆ, ಮಾವ. ಅವಳನ್ನು ಒಂದು ಸಾರಿ ನೋಡಿ ಮಾತಾಡು ಅಂತ ಮಾತ್ರ.

**ಬಿಷಪ್ :** ಆ ಒಂದನ್ನು ಮಾತ್ರ ಮಾಡಲು ನನಗೆ ಇಚ್ಛೆ ಇಲ್ಲ ದಿದ್ದರೆ ? ನೀನು ನಮ್ಮ ಪಂಗಡದ ಹೊರಗಿನಿಂದ ನಿನ್ನ ಹೆಂಡತಿಯನ್ನು ಆರಿಸಿಕೊಂಡು ನಮ್ಮೆಲ್ಲರನ್ನೂ ತೊಂದರೆಗೆ ಸಿಕ್ಕಿಸಿದ್ದೀಯೆ. ಇದು ನಿನಗೆ ಗೊತ್ತು. ಆದರೂ ಕೂಡ ದಿನಕ್ರಮೇಣ ಅವಳ ಮೇಲೆ ನಮಗೆ ವಿಶ್ವಾಸ ಹೆಚ್ಚಾಗುತ್ತಿದೆ. ಅಲ್ಲದೆ ಅವಳಿಗೋಸ್ಕರ ನಮ್ಮ ಕೈಲಾದ್ದನ್ನೆಲ್ಲಾ ನಾವು ಮಾಡಲು ಸಿದ್ಧರಾಗಿದ್ದೇವೆ. ಅದಕ್ಕಿಂತ ಹೆಚ್ಚಾಗಿ ಏನೂ ನಮ್ಮ ಕೈಲಾಗು ವುದಿಲ್ಲ. ನನ್ನ ಕಾಗದವನ್ನು ಓದಲಿಚ್ಛಿಸುತ್ತೀಯಾ ?

**ಹಾಗ್‌ಬಾರ್ಟ್ :** ಇಲ್ಲ.

**ಬಿಷಪ್ :** ನೀನು ಅದನ್ನು ಓದುವುದು ಒಳ್ಳೆಯದು ಅಂತ ಕಾಣುತ್ತೆ. ಮರ್ಯಾದೆಯಿಂದ ಬರೆದಿರುವ ಕಾಗದ !

**ಹಾಗ್‌ಬಾರ್ಟ್‌**: ವಿಷಯಗಳನ್ನು ಮರ್ಯಾದೆಯಿಂದ ಹೇಳುವುದು ನಿನಗೆ ಚೆನ್ನಾಗಿ ಬರುತ್ತೆ. ಆದರೆ, ಮಾವ, ಹಾಗೆ ಕಾಗದ ಬರೆಯುವ ಕೆಲಸ —ಅದರಲ್ಲೂ ನೀನು ಬರೆಯುವುದು!

**ಬಿಷಪ್** : ಹೌದು ; ಅದನ್ನು ನಾನು ಬದಲಾಯಿಸಲಾರೆ.

**ಹಾಗ್‌ಬಾರ್ಟ್‌** : ಹಾಗಾದರೆ ಕಾಗದದ ರವಾನೆ ಸ್ವಲ್ಪ ತಡಮಾಡ ಬಹುದಲ್ಲ ?

**ಬಿಷಪ್** : ರವಾನೆ ಆಗಿಹೋಯಿತು.

**ಹಾಗ್‌ಬಾರ್ಟ್‌** : ರವಾನೆ ಆಯಿತೆ ?

**ಬಿಷಪ್** : ಈ ಬೆಳಗ್ಗೆ ಆಯಿತು. ಆ ವಿಷಯದಲ್ಲಿ ಮುಂದೆ ಮಾಡ ಬೇಕಾದ್ದು ಏನೂ ಇಲ್ಲ.

**ಹಾಗ್‌ಬಾರ್ಟ್‌**: ಮಾವ, ನೀನು ನಿಷ್ಕರುಣಿ!

**ಬಿಷಪ್** : ಹಾಗೆ ಹೇಳುವುದು ಹೇಗೆ ಹಾಗ್‌ಬಾರ್ಟ್‌? ನೀನು ಪಾದ್ರಿವೃತ್ತಿಯನ್ನು ಬಿಡಲು ಒಪ್ಪಿದೆ. ಅದು ನನ್ನ ಮನಸ್ಸಿಗೆ ಎಷ್ಟು ವ್ಯಸನ ಉಂಟುಮಾಡಿತೋ ದೇವರಿಗೇ ಗೊತ್ತು. (ಮೇಲಕ್ಕೆ ಏಳುವನು.) ಆದರೆ ತನ್ನ ಗಂಡನ ಹೆಸರನ್ನೂ ಇಟ್ಟುಕೊಂಡಿರದ ಹೆಂಗಸನ್ನು ನನ್ನ ಮನೆಗೆ ಬರ ಮಾಡಿಕೊಳ್ಳಲು ನಾನು ಒಪ್ಪುವುದಿಲ್ಲ. ಅವಳ ಗಂಡನು ಯಾರು ಎನ್ನುವು ದಾದರೂ ನಮಗೆ ಗೊತ್ತೆ? ಅವಳ ಮದುವೆ ಮತ್ತು ಅವಳು ಗಂಡನನ್ನು ಬಿಟ್ಟದ್ದು, ಎರಡೂ ಬೇರೆ ದೇಶದಲ್ಲಿ ನಡೆದ ವಿಷಯಗಳು. ಆಗಿನಿಂದ ಇಲ್ಲಿಯವರೆಗೂ ಅವಳ ಜೀವನದ ವಿಷಯ ನಮಗೊಂದೂ ತಿಳಿಯದು; ಆ ಜೀವನವು ನಿರ್ದೋಷವಾಗಿತ್ತು ಅಂತ ಹೇಳಲು ಸಾಧ್ಯವಿಲ್ಲ. ಇಲ್ಲಿಗೆ ಬಂದ ಮೇಲೆ ಚರ್ಚಿಗೆ ಅವಳು ಒಂದು ಸಾರಿಯೂ ಬಂದಿಲ್ಲ. ಅವಳದು ಒಂದು ವಿಚಿತ್ರವಾದ ಜೀವನದ ಹಾಗೆ ಕಾಣುತ್ತೆ. ಸ್ವಲ್ಪ ಕಾಲದಿಂದೀಚೆಗೆ ಒಬ್ಬ ಮಾನಹೀನನಾದ ಮನುಷ್ಯ ಅವಳ ಭೇಟಿಗೆ ಹೋಗಿ ಬಂದು ಮಾಡು ತ್ತಿದ್ದಾನೆ!

**ಹಾಗ್‌ಬಾರ್ಟ್‌** : ಜನರಲ್ ರೋಸೆನ್ ?

**ಬಿಷಪ್** : ಹೌದು, ಜನರಲ್ ರೋಸೆನ್. ಅವನು ಕುಡುಕ ಮತ್ತು ಇತರ ವಿಧಗಳಲ್ಲಿ ಪೋಕರಿ ಎಂದೂ ಹೇಳಬೇಕು.

ಹಾಗ್ ಬಾರ್ಟ್ : ಆದರೇನಂತೆ ? ಅವನು ಎಲ್ಲ ಕಡೆಗೂ ಹೋಗುತ್ತಾನೆ. ಇಲ್ಲಿಗೂ ಬರುತ್ತಾನೆ.

ಬಿಷಪ್ : ಸರಿ, ಹೌದು, — ಗಮನಿಸಬೇಕಾದ ವಿಷಯವೇನೆಂದರೆ, ಅವನು ಸೈನ್ಯದಲ್ಲಿ ಸೇವೆ ಸಲ್ಲಿಸಿ ಪ್ರಶಸ್ತಿಗಳನ್ನು ಪಡೆದಿದ್ದಾನೆ. ಜನಗಳಲ್ಲಿ ಹೊಂದಾವಣೆ ತುಂಬಾ ಇದೆ ಅವನಿಗೆ. ಅದೂ ಅಲ್ಲದೆ ಅವನ ಬಂಧುಬಳಗದವರಲ್ಲಿ ಅನೇಕರು ದೊಡ್ಡಮನುಷ್ಯರು. ಲೋಕದ ರೀತಿಯೇ ಹೀಗೆ.

ಹಾಗ್ ಬಾರ್ಟ್ : ಆದರೆ ಮಿಸಸ್ ಫಾಲ್ಕಳಿಗೆ ಮಾತ್ರ ಇಲ್ಲಿ ಸ್ವಾಗತವಿಲ್ಲ !

ಬಿಷಪ್ : ಅವಳು ಹೆಂಗಸು !

ಹಾಗ್ ಬಾರ್ಟ್ : ಇಂತಹ ಲೋಕರೀತಿಯನ್ನು ಎಷ್ಟು ಕಾಲ ಸಹಿಸಲಾದೀತು ?

ಬಿಷಪ್ : ಬಾ, ಬಾ, ಆ ಭಾವನೆಗಳು ನಿನ್ನ ಮನಸ್ಸಿಗೂ ಅಂಟಿವೆಯೆ ?

ಹಾಗ್ ಬಾರ್ಟ್ : ನೀನು ಇತ್ಯರ್ಥಕ್ಕೆ ಬರುವ ಮುನ್ನ ಅವಳನ್ನು ಒಂದು ಸಾರಿಯಾದರೂ ನೋಡಿ ಮಾತಾಡಬೇಕಾಗಿತ್ತು.

ಬಿಷಪ್ : ಒಂದು ವಿಷಯ ನಿನಗೆ ಗುಟ್ಟಾಗಿ ಹೇಳುತ್ತೇನೆ, ಕೇಳು. ಊರ ಹೊರ ಪ್ರದೇಶದಲ್ಲಿ ಅವಳ ಮನೆಯ ಸಮೀಪದಲ್ಲೇ ವಾಸಿಸುವ ಜಸ್ಟಿಸ್ ರೋಸ್ಟ್ ಹೇಳಿದ್ದು. ಜನರಲ್ ರೋಸೆನ್ ಹೊತ್ತು ಗೊತ್ತು, ಇಲ್ಲದೆ ಮನಸ್ವಿಯಾಗಿ ಅವಳ ಮನೆಗೆ ಹೋಗಿಬರುತ್ತಾನೆ – ಎಂಬುದಾಗಿ ! ಅಂತಹ ಹೆಂಗಸಿನ ಗೋಜು ನನಗೆ ಬೇಡ.

ಹಾಗ್ ಬಾರ್ಟ್ : ಅಂತಹ ಗಂಡಸಿನ ಗೋಜು ?

ಬಿಷಪ್ : ನಾನು ಮೊದಲೇ ಹೇಳಿದಂತೆ ಆ ವಿಷಯವೇ ಬೇರೆ.

ಹಾಗ್ ಬಾರ್ಟ್ : ಬೇರೆ ಇರಬಹುದು – ಮಿಸೆಸ್ ಫಾಲ್ಕ್ ಜನರಲ್ ವಿಷಯದಲ್ಲಿ ಅನುಕಂಪ ತೋರಿಸಿ, ಅವನ ಆಶಯಗಳಲ್ಲಿ ಆಸಕ್ತಿಯನ್ನಿಟ್ಟು ಅವನ ಹಿತೈಷಿಯಾಗಿದ್ದಾಳೆ. ಅಷ್ಟೆ !

ಬಿಷಪ್ : ಹಾಗಾದರೆ ಹಿಂದಿನಿಂದಲೂ ಅವನ ಪರಿಚಯ ಅವಳಿಗಿತ್ತೆ ?

**ಹಾಗ್ ಬಾರ್ಟ್ಸ್ :** ಇದ್ದರೂ ಇರಬಹುದು.

**ಬಿಷಪ್ :** ಹಾಗಾದರೆ ಅವಳ ನಡತೆಗೆ ಏನೋ ಒಂದು ಗೂಢವಾದ ಕಾರಣವಿರಬೇಕು.

**ಹಾಗ್ ಬಾರ್ಟ್ಸ್ :** ಅದು ಏನು ನಾನು ಹೇಳಲಿ? ಅವಳ ಅಂತಃಕರಣ ನಮ್ಮದಕಿಂತಲೂ ದಯಾಪೂರಿತವಾಗಿದೆ; ನಮಗಿಂತಲೂ ಹೆಚ್ಚಾಗಿ ಮನಃಪೂರ್ವಕವಾಗಿ ಅವಳು ತ್ಯಾಗಮಾಡಬಲ್ಲಳು!

**ಬಿಷಪ್ :** ಹಾಗಾದರೆ ಅದು ನಿನಗೆ ಗೊತ್ತು ?

**ಹಾಗ್ ಬಾರ್ಟ್ಸ್:** ಗೊತ್ತು. ಅವಳ ಸ್ವಭಾವ ನಮ್ಮದಕ್ಕಿಂತಲೂ ಎತ್ತರವಾದದ್ದು. ಬುದ್ಧಿಶಕ್ತಿಯಲ್ಲಿಯೂ ವಿವೇಚನಾಶಕ್ತಿಯಲ್ಲಿಯೂ ಶೀಲಗುಣಾದಿಗಳಲ್ಲೂ ಪರಿಷ್ಕೃತಳಾದವಳು.

**ಬಿಷಪ್ :** ಅತ್ಯಂತ ವಿಸ್ಮಯದಿಂದ ನಿನ್ನ ಮಾತುಗಳನ್ನು ಕೇಳುತ್ತಿದ್ದೇನೆ.

**ಹಾಗ್ ಬಾರ್ಟ್ಸ್ :** ಅಪಾರ್ಥಗಳನ್ನೇನೂ ಕಲ್ಪಿಸಬೇಡ. ಅವಳಲ್ಲೂ ತಪ್ಪುಗಳಿವೆ.

**ಬಿಷಪ್ :** ನಿಜವಾಗಿಯೂ? ಹಾಗಾದರೆ ಅದನ್ನು ಒಪ್ಪಿಕೊಳ್ಳುತ್ತೀಯಾ? — ಹಾಗ್ ಬಾರ್ಟ್ಸ್, ನಿನ್ನಲ್ಲಿ ಮನಃಪೂರ್ವಕವಾಗಿ ಒಂದು ಪ್ರಾರ್ಥನೆಯನ್ನು ಮಾಡಿಕೊಳ್ಳುತ್ತೇನೆ-ಸ್ವಲ್ಪಕಾಲ ಇಲ್ಲಿ ಬಿಟ್ಟು ಎಲ್ಲಾದರೂ ಹೋಗಿ ಇರು.

**ಹಾಗ್ ಬಾರ್ಟ್ಸ್ :** ಎಲ್ಲಾದರೂ ಹೋಗಿ ಇರು — ?

**ಬಿಷಪ್ :** ಹೌದು – ನಿಮ್ಮ ಚಿಕ್ಕಪ್ಪನ ಮನೆಗೆ, ಮಸಲಾ! ಒಂದು ವಾರ ಅಥವಾ ಎರಡು ವಾರ ಕಾಲ ನಿನ್ನ ಯೋಚನೆಗಳನ್ನೆಲ್ಲಾ ತಿಳಿಮಾಡುವುದಕ್ಕೆ—ಮಿಕ್ಕ ವಿಷಯಗಳಲ್ಲಿಯೂ ಒಂದು ಸಮಾಧಾನ ಸ್ಥಿತಿಗೆ ಬರುವುದಕ್ಕೋಸ್ಕರ. ನಿನ್ನ ಮೆದುಳು ಈಗ ಅಲ್ಲೋಲಕಲ್ಲೋಲವಾಗಿರಬೇಕು.

**ಹಾಗ್ ಬಾರ್ಟ್ಸ್ :** ಅದೇನೋ ನಿಜ. ಆದರೆ — ,

**ಬಿಷಪ್ :** ಮನಸ್ಸಿನಲ್ಲಿರುವುದನ್ನು ಹೇಳು.

**ಹಾಗ್ ಬಾರ್ಟ್ಸ್ :** ನನ್ನ ಮನಸ್ಸು ಕಾನೆ ದಿನಗಳಿಂದ ಅಲ್ಲೋಲಕಲ್ಲೋಲವಾಗಿದೆ. ಅದು ನಿನಗೆ ಸರಿಯಾಗಿ ಗೊತ್ತಿಲ್ಲ. ಕಳೆದ ಚಳಿಗಾಲದಲ್ಲಿ

ನಾನು ಮಿಸೆಸ್ ಫಾಲ್ಕ್‌ಗೆ ಮಾಡಬಾರದ ಅನ್ಯಾಯ ಮಾಡಿದಾಗಿನಿಂದಲೂ ನನ್ನ ಸ್ಥಿತಿ ಆರೀತಿಯಲ್ಲಿದೆ—

**ಬಿಷಪ್**: ಅನ್ಯಾಯವೆಂದು ನಿರ್ದಿಷ್ಟವಾಗಿ ಹೇಳಲಾಗುವುದಿಲ್ಲ. ಆದರೆ—

**ಹಾಗ್‌ಬಾರ್ಡ್**: ಅದು ನಿಜವಾಗಿಯೂ ಅನ್ಯಾಯವೆ! ಅದು ನನ್ನ ಜೀವನಪಥದ ದಿಕ್ಕನ್ನೇ ಬದಲಾಯಿಸಿಬಿಟ್ಟಿತು! ನೆನಸಿಕೊಂಡರೆ ಎಂತಹ ಆವೇಶಪೂರಿತ ಮಾತುಗಳನ್ನು ಉನ್ಮತ್ತನಂತೆ ಹೇಳಿದೆ! ಅದರ ಪರಿಣಾಮ ವಾಗಿ ನನ್ನನ್ನು ಕಂಡರೆ ನನಗೇ ಭಯವಾಗುತ್ತಿತ್ತು. ಆಗ ನಾನು ಆತ್ಮ ವಿಮರ್ಶೆಯಲ್ಲಿ ದೀರ್ಘಕಾಲ ಪೇಚಾಡಿದೆ – ಆ ಕತೆ ತೆಗೆದು ನಿನಗೆ ಬೇಜಾರು ಪಡಿಸುವುದಿಲ್ಲ. ಆಗ ನಾನು ಇಲ್ಲಿರಲಿಲ್ಲ. ಆದ್ದರಿಂದ ನಿನಗೆ ಏನೂ ತಿಳಿಯದು. ಆಮೇಲೆ ನಾನು ಖಾಯಿಲೆ ಬಿದ್ದು ಗುಣಮಾಡಿಕೊಳ್ಳುವುದಕ್ಕೋಸ್ಕರ ಒಂದು ಆರೋಗ್ಯಕೇಂದ್ರಕ್ಕೆ ಬೇರೆ ಊರಿಗೆ ಹೋದೆ. ಅಲ್ಲಿ ಆಗಟ್‌ಅನ್ನು ನೋಡಿದೆ. ಅವಳ ಭೇಟಿ ನಾನು ನೆನೆಯದಷ್ಟು ಪರಿಣಾಮಕಾರಿಯಾಯಿತು. ಆಗ ನನಗೆ ಜ್ಞಾನೋದಯವಾಗಿ ಪ್ರಪಂಚದ ವಾಸ್ತವಾಂಶಗಳ ಗೋಚರ ವಾದಂತೆ ತೋರಿತು. ಮಾನವನು ಬದಲಾಯಿಸಿರುವಂತೆ ಕಂಡನು; ಜೀವನ ರಹಸ್ಯ ನನ್ನ ಕಿವಿಗಳಲ್ಲಿ ಪಿಸುಪಿಸುಗುಟ್ಟಿದಂತೆ ಆಯಿತು! ನನ್ನ ಮನಸ್ಸಿನಲ್ಲಿ ಎಲ್ಲವೂ ತಲೆಕೆಳಗಾಗಿ ಅಲ್ಲೋಲಕಲ್ಲೋಲವಾಯಿತು. ಇದು ನಿನಗೆ ಊಹಾತೀತವಾಗಿರಬಹುದು. ಅದಕ್ಕೆ ಕಾರಣ – ಅವಳಲ್ಲಿದ್ದ ಒಂದು ಚೈತನ್ಯ— ಅವಳಲ್ಲಿ ಯಾವಾಗಲೂ ಇದ್ದ ಚೈತನ್ಯ— ನನ್ನಲ್ಲಿ ಅಭಾವವಾಗಿರಬೇಕು. ನನ್ನ ಜೀವಮಾನದ ಒಂದು ನ್ಯೂನತೆಯಾಗಿರಬೇಕು ಅದು! ಎಲ್ಲವೂ ಸ್ವಾಭಾವಿಕವಾಗಿಯೇ ಇರುತ್ತಿತ್ತು! ಇದೊಂದು ಆಶ್ಚರ್ಯ! ಏನು ಮಾಡಬೇಕಾದರೂ ಅವಳು ಅದನ್ನು ಇತರರಿಗಿಂತ ಸುಲಭವಾಗಿ ನಗುತ್ತಾನಗುತ್ತಾ ಅಂದಚೆಂದಗಳಿಂದ – ತನ್ನ ಸೊಗಸುತನ ತನಗೇ ಗೊತ್ತಿಲ್ಲದಂತೆ ಮಾಡುತ್ತಿದ್ದಳು! ಅವಳು ನಿರಾತಂಕವಾಗಿ ಸರಳವಾಗಿ ಆರೋಗ್ಯದಿಂಕೊಡಗೂಡಿ ಇರಲು ಕಾರಣವೇನು? ಇದು ಅವಳಿಗೆ ಹೇಗೆ ಲಭಿಸಿತು? ನನಗೆ ಏಕೆ ಲಭಿಸಲಿಲ್ಲ? ಇದಕ್ಕೆ ಕಾರಣಗಳೇನು? ಎಂದು ವಿಚಾರಪರನಾದೆ. ಅವಳಲ್ಲಿ ಮತ್ತು ಇತರರಲ್ಲಿ ಇರುವ ಕೆಲವು ಗುಣಗಳ ನ್ಯೂನತೆ ಮತ್ತು ತೀವ್ರವಾದ

ಪರದೂಷಣೆ ಸ್ವಭಾವ – ಇವು ಕಾರಣಗಳೆಂದು ತೀರ್ಮಾನಕ್ಕೆ ಬಂದೆ. ಹೀಗೆ ನಿಜಾಂಶವನ್ನು ಹೇಳುವುದು ಸ್ವಲ್ಪ ನಾಚಿಕೆಕೇಡಾಗಿ ಕಾಣಬಹುದು; ಆದರೇನು ? ಅದು ವಾಸ್ತವ! ನಾನು ಯಾವಾಗಲೂ ದುಡುಕಿ ತಪ್ಪುತಪ್ಪಾಗಿ ನಡೆದುಕೊಳ್ಳುವುದು ಅಭ್ಯಾಸವಾಗಿಬಿಟ್ಟಿದೆ! ಅದು ಸರಿ, ಈಗ ನಾನು ಯಾವ ವಿಷಯ ಮಾತಾಡಬೇಕೆಂದಿದ್ದೆ ?

**ಬಿಷಪ್** : ನೀನು ಮಿಸಸ್ ಫಾಲ್ಕ್‌ನ ವಿಷಯ ಮಾತಾಡಬೇಕು ಎಂದಿದ್ದೆ ಅಂತ ಕಾಣುತ್ತೆ.

**ಹಾಗ್‌ಬಾರ್ಟ್** : ಹೌದು ಮಾವ – ನನ್ನ ಮಾತಿಗೆ ಏನೂ ಅಪಾರ್ಥ ಕಲ್ಪಿಸಬೇಡ. ಇಷ್ಟು ದಿನಗಳೂ ನಾನು ಅವಳನ್ನು ಬಿಟ್ಟಿರಲೇ ಆಗುತ್ತಿಲ್ಲ!

**ಬಿಷಪ್**! ಹಾಗಾದರೆ ನಿನ್ನ ಮಾತುಕತೆಗಳು ಅವಳ ಸಂಗಡ ಲೇಯೋ ?

**ಹಾಗ್‌ಬಾರ್ಟ್** : ಹೌದು ಅಂತ ಹೇಳಬೇಕೆ ? – ಹೌದು ಅವಳ ಸಂಗಡಲೇ — ಅಂದರೆ ಆಗಟ್‌ಳ ಜೊತೆಯಲ್ಲೂ ಕೂಡ ! ನೀನು ನನ್ನನ್ನು ಹೊರಟುಹೋಗು ಎಂದು ಹೇಳುತ್ತಿ. ನಾನೊಬ್ಬನು ಇಬ್ಬರಾದರೆ — ದಿನವು ಇಮ್ಮಡಿಯಾದರೆ – ಆಗಲೂ ಕೂಡ ತೃಪ್ತಿಯಾಗುವಷ್ಟು ಅವಳ ಜೊತೆಯಲ್ಲಿ ಇದ್ದಂತಾಗುವುದಿಲ್ಲ. ನನಗೆ ಈಗ ಇರುಳು ಕಳೆದು ಹಗಲು ಕಂಡಂತಾಗಿದೆ. ಮಂಕಿನ ಮುಸುಕು ತೆರೆದು ಪ್ರಜ್ಞೆಯುಂಟಾಗಿದೆ ಈಗ ನನಗೆ! ಏನಾದರೂ ಆಗಲಿ, ನಾನು ಇಲ್ಲಿ ಬಿಟ್ಟು ಹೋಗುವುದಿಲ್ಲ.

**ಬಿಷಪ್** : ಇದನ್ನು ಪ್ರಜ್ಞೆಯೆಂದು ಕರೆಯುತ್ತೀಯಾ ? ಅಯ್ಯೋ ಮಂಕು ನನ್ನ ಮಗನೆ!

**ಹಾಗ್‌ಬಾರ್ಟ್**: ಅದನ್ನು ನಿನ್ನೊಡನೆ ನಾನು ಚರ್ಚಿಸಲಾರೆ. ನಿನಗೆ ಅರ್ಥವಾಗುವುದಿಲ್ಲ. ಹಿಂದೆ ಒಂದು ಸಾರಿ ನಾನು ಅಜ್ಜಿ ಕೊಟ್ಟ ಪುಸ್ತಕಗಳನ್ನು ಓದಲು ಇಟ್ಟುಕೊಂಡಿದ್ದನ್ನು ಕಂಡು, ಅವುಗಳನ್ನು ನೀನು ಹಾಳುಮೂಳು ತುಂಬಿರುವ ಚಿಕ್ಕಮನೆಗೆ ತೆಗೆದುಕೊಂಡುಹೋಗಿ ಇಟ್ಟು ಬಂದೆ. ಆಗಲೇ ನಿನಗೆ ಈ ವಿಷಯಗಳು ಯಾವುವೂ ಅರ್ಥವಾಗುತ್ತಿರಲಿಲ್ಲ!

**ಬಿಷಪ್ :** ಸರಿ, ಆ ಹಳೆ ಕತೆ ತೆಗೆದೆಯಾ ? ನಿನ್ನ ಮನಸ್ಸಿನಂತೆ ನೀನು ನಡೆಯಬಹುದು. ಯಾವ ವಿಷಯದಲ್ಲೂ ನಾನು ನಿನಗೆ ಬಲವಂತ ಪಡಿಸಿದೆನೆಂದು ಹೇಳಲು ನಿನಗೆ ಅವಕಾಶ ನಾನು ಕೊಡುವುದಿಲ್ಲ.

**ಹಾಗ್‌ಬಾರ್ಟ್ :** ಇಲ್ಲ ಮಾವ ! ನನಗೆ ನೀನು ಯಾವಾಗಲೂ ಒಳ್ಳೆಯವನಾಗಿದ್ದೀಯೆ !

**ಬಿಷಪ್ :** ಈ ಸಂದರ್ಭದಲ್ಲಿ ಒಂದು ಹೊಸ ವಿಷಯವನ್ನು ಗಮನಿಸಬೇಕಾಗಿದೆ. ಕೆಲವು ದಿನಗಳಿಂದಲೂ ಅದನ್ನು ನಾನು ನೋಡುತ್ತಿದ್ದೇನೆ.

**ಹಾಗ್‌ಬಾರ್ಟ್ :** ನಿನ್ನ ಅರ್ಥವೇನು ?

**ಬಿಷಪ್ :** ಈಗ ನಡೆದ ನಮ್ಮಿಬ್ಬರ ಸಂಭಾಷಣೆಯಲ್ಲಿ ಅಬ್ಬಬ್ಬ ಎಂದರೆ ಆಗಟ್‌ನ ಹೆಸರನ್ನು ಎರಡಾವರ್ತಿ ಮಾತ್ರ ಹೇಳಿರಬಹುದು ಅಲ್ಲವೆ ?

**ಹಾಗ್‌ಬಾರ್ಟ್ :** ಆದರೆ ನಾವು ಆಗಟ್ ವಿಷಯ ಮಾತಾಡುತ್ತಿರಲಿಲ್ಲ, ಅಷ್ಟೆ !

**ಬಿಷಪ್ ;** ಹಾಗಾದರೆ ಅವಳಲ್ಲಿ ನೀನು ಇಟ್ಟಿದ್ದ ಪ್ರೀತಿ ಇನ್ನುಮೇಲೆ ಇಲ್ಲವೊ ?

**ಹಾಗ್‌ಬಾರ್ಟ್ :** ಆಗಟ್‌ನ ಮೇಲೆ ಪ್ರೀತಿಯಿಲ್ಲ ? (ನಗುವನು) ಕೇಳಬೇಕೆ, ಆ ಪ್ರಶ್ನೆಯನ್ನು ? ನೀನು ಏನು ಹೇಳುತ್ತಿರುವುದು ? ನಿನ್ನ ಮನಸ್ಸಿನಲ್ಲಿ ಬೇರೆ ಭಾವನೆಯೇನಾದರೂ — ?

**ಬಿಷಪ್ :** ನನ್ನ ಮನಸ್ಸಿನಲ್ಲಿ ಬೇರೆ ಭಾವನೆ ಇದೆ ಅಂತಲ್ಲ ಹೇಳಲು —

**ಹಾಗ್‌ಬಾರ್ಟ್ :** (ಪುನಃ ನಗುತ್ತಾ) ನಿನ್ನ ಮನಸ್ಸಿನಲ್ಲಿ ಅದು ಒಂದು ತಪ್ಪು ಭಾವನೆ, ಮಾವ !

**ಬಿಷಪ್ :** ನಾನು ತಿರುಗಿ ಹೇಳುತ್ತೇನೆ, ಹಾಗ್‌ಬಾರ್ಟ್. ಒಂದೆರಡು ವಾರ ಎಲ್ಲಿಯಾದರೂ ಹೋಗಿರು. ಈ ವಾತಾವರಣದ ಸಂಪರ್ಕವಿಲ್ಲದೆ ದೂರದಿಂದ ಎಲ್ಲವನ್ನೂ ಸರಿಯಾಗಿ ಪರಿಶೀಲಿಸು, ನಿನ್ನ ಮತ್ತು ಇತರರ ಸ್ಥಿತಿಗಳನ್ನೆಲ್ಲಾ ನಿಧಾನವಾಗಿ ಪರಿಶೀಲಿಸು.

**ಹಾಗ್‌ಬಾರ್ಟ್ :** ಆಗುವುದಿಲ್ಲ, ಮಾವ, ಖಂಡಿತವಾಗಿಯೂ ಆಗುವುದಿಲ್ಲ. ಅದಕ್ಕೆ ಬದಲಾಗಿ "ಒಂದೆರಡು ವಾರ ಮಲಗಿ ನಿದ್ರೆಮಾಡು, ಹಾಗ್‌ಬಾರ್ಟ್, ಅದರಿಂದ ನಿನಗೆ ತುಂಬಾ ಒಳ್ಳೆಯದಾಗುತ್ತೆ!" ಎಂದು ಬೇಕಾದರೂ ಹೇಳಬಹುದು. ಆಗುವುದಿಲ್ಲ. ಈಗ, ಕಟ್ಟೆ ಕಡೆಯದಾಗಿ ನನ್ನ ಜ್ಞಾನೇಂದ್ರಿಯಗಳೆಲ್ಲಾ ಎಚ್ಚೆತ್ತುಕೊಂಡಿವೆ. ಎಷ್ಟರಮಟ್ಟಿಗೆಂದರೆ ಅವುಗಳನ್ನು ಹತೋಟಿಯಲ್ಲಿಟ್ಟಿರುವುದು ಕಷ್ಟಸಾಧ್ಯವಾಗಿದೆ!

**ಬಿಷಪ್ :** ಅದಕ್ಕೋಸ್ಕರವೇ ನಾನು ಹೇಳುತ್ತಿರುವುದು.

**ಹಾಗ್‌ಬಾರ್ಟ್ :** ಅದಕ್ಕೋಸ್ಕರಲೇ ನಾನು ಈವೊಂದು ಸಾರಿ, ಹಿಡಿದ ದಾರಿಯನ್ನೇ ಹಿಡಿದು ನೇರವಾಗಿ ಮುನ್ನಡೆಯಬೇಕು. ಈಗ ನಾನು ಇಲ್ಲಿ ಇದ್ದೇತೀರಬೇಕು. ನಾನು ಹೋಗಿಬರುತ್ತೇನೆ – ಗುಡ್‌ಮಾರ್ನಿಂಗ್, ಮಾವ, ಸ್ವಲ್ಪ ಕೈಕಾಲಾಡಿಸಿಕೊಂಡು ಬರಲು ಹೋಗುತ್ತೇನೆ.

**ಬಿಷಪ್ :** ಮಿಸೆಸ್ ಫಾಲ್ಕನ್ನು ನೋಡಲು ಹೋಗುತ್ತೇನೆಂದು ಹೇಳು!

**ಹಾಗ್‌ಬಾರ್ಟ್ :** ನನ್ನ ದುರದೃಷ್ಟದಿಂದ ಅವಳಲ್ಲಿಗೆ ಈ ಬೆಳಗ್ಗೆ ಹೋಗಲು ನನಗೆ ಮುಖವಿಲ್ಲ. ನಿನ್ನೆಯೆಲ್ಲಾ ಅಲ್ಲಿ ಕಳೆದೆ. ಆದ್ದರಿಂದ ಈ ದಿನ ಮಧ್ಯಾಹ್ನಕ್ಕೆ ಮುಂಚೆ ಅಲ್ಲಿಗೆ ಹೋಗಲಾಗುವುದಿಲ್ಲ. ಅದೂ ಅಲ್ಲದೆ ನಿನ್ನೊಡನೆ ಮಾತಾಡಿ ನನ್ನ ಮನಸ್ಸೆಲ್ಲಾ ಕದಡಿಹೋಗಿದೆ. ನನ್ನ ಯೋಚನೆಗಳನ್ನು ತಹಬಂದಿಗೆ ತರಲು ಬೇರೆ ಮಾರ್ಗವಿಲ್ಲದ ವೇಳೆಯಲ್ಲಿ ನಾನು ಮನಸ್ಸಮಾಧಾನಕ್ಕೋಸ್ಕರ ಸುತ್ತಾಡುವುದಕ್ಕೆ ಹೋಗುತ್ತೇನೆ. ಥ್ಯಾಂಕ್ಸ್, ಮಾವ!

**ಬಿಷಪ್ :** ಹಾಗಾದರೆ ನನ್ನ ಕಾಗದವನ್ನು ನಿನಗೆ ಓದಲು ಇಚ್ಛೆಯಿಲ್ಲವೆ?

**ಹಾಗ್‌ಬಾರ್ಟ್ :** ಹೌದು, ನಿಜ, ಕಾಗದದ ವಿಷಯ ನನಗೆ ಮರೆತೇ ಹೋಯಿತು! ಅದೊಂದು ಎಲ್ಲವನ್ನೂ ತಲೆಕೆಳಗು ಮಾಡುತ್ತದೆ! ನಾನು ಅದನ್ನು ಮರೆತದ್ದು ಹೇಗೆ?

**ಬಿಷಪ್ :** ನೀನೇ ನೋಡು, ನಿನ್ನ ಮನಸ್ಸು ಸ್ತಿಮಿತವಾಗಿಲ್ಲವೆಂಬುದನ್ನು! ಎಲ್ಲವೂ ಗಲಿಬಿಲಿಯಾಗಿದೆ ನಿನ್ನ ಮನಸ್ಸಿನಲ್ಲಿ! ನೀನು ಮನಸ್ಸನ್ನು

ಹಿಡಿದು ನಿಲ್ಲಿಸಬೇಕು! ಇಲ್ಲಿ ಬಿಟ್ಟು ಎಲ್ಲಾದರೂ ಹೋಗುವುದೇ ಅದಕ್ಕೆ ಉಪಾಯ!

**ಹಾಗ್‌ಬಾರ್ಸ್ಟ್** : ಅದು ಸರ್ವಥಾ ಆಗುವುದಿಲ್ಲ. ಹೋಗಿ ಬರುತ್ತೇನೆ, ಮಾವ.

**ಬಿಷಪ್** : ಇಗೋ ಅಜ್ಜಿ ಬಂದಳು.

(ಕಾರ್ನೀಲಿಯಾ ಮತ್ತು ಅಜ್ಜಿ ಪ್ರವೇಶಿಸುವರು.)

**ಹಾಗ್‌ಬಾರ್ಸ್ಟ್** : ಗುಡ್‌ಮಾರ್ನಿಂಗ್, ಅಜ್ಜಿ, ಚೆನ್ನಾಗಿ ನಿದ್ದೆ ಮಾಡಿದೆಯಾ!

**ಅಜ್ಜಿ** : (ಕಾರ್ನೀಲಿಯಾ ತೋಳನ್ನು ಹಿಡಿದುಕೊಂಡು ಮುಂದೆ ಬಂದು) ಚೆನ್ನಾಗಿ ಮಾಡಿದೆ.

**ಕಾರ್ನೀಲಿಯಾ** : ಬೆಳಗಿನ ತನಕ ನಿದ್ದೆಮಾಡುತ್ತಿದ್ದಳು.

**ಬಿಷಪ್** : ಅದನ್ನು ಕೇಳಿ ತುಂಬಾ ಸಂತೋಷ. (ಅವಳ ಇನ್ನೊಂದು ಕೈ ಹಿಡಿದುಕೊಳ್ಳುವನು.)

**ಅಜ್ಜಿ** : ಅಷ್ಟು ಗಟ್ಟಿಯಾಗಿ ಕೂಗಬೇಡ. ಈಹೊತ್ತು ಹವಾ ಚೆನ್ನಾಗಿದೆ. ನನಗೆ ಎಲ್ಲವೂ ಚೆನ್ನಾಗಿ ಕೇಳಿಸುತ್ತೆ! (ಹಾಗ್‌ಬಾರ್ಸ್ಟ್ ಕಡೆ ತಿರುಗಿ) ರಾತ್ರೆ ನನ್ನ ನೋಡಲು ಬರಲೇ ಇಲ್ಲ.

**ಹಾಗ್‌ಬಾರ್ಸ್ಟ್** : ನಾನು ಮನೆಗೆ ಹಿಂದಿರುಗಿ ಬಂದದ್ದೇ ಬಹಳ ಹೊತ್ತಾಗಿತ್ತು, ಅಜ್ಜಿ.

**ಅಜ್ಜಿ** : ಹೇಳುತಾ ಇದೀನಿ- ನೀನು ಗಟ್ಟಿಯಾಗಿ ಕೂಗಲವಶ್ಯಕವಿಲ್ಲ ಅಂತ!

**ಕಾರ್ನೀಲಿಯಾ** : ಅಜ್ಜಿ ಯಾವಾಗಲೂ ತನಗೆ ಚೆನ್ನಾಗಿ ಕಿವಿ ಕೇಳಿಸುತ್ತೆ ಎಂದು ನಟಿಸುತ್ತಾಳೆ.

**ಅಜ್ಜಿ** : (ಕಿಟಕಿಯ ಪಕ್ಕದಲ್ಲಿ ಒಂದು ದೊಡ್ಡ ಕುರ್ಚಿಯ ಮೇಲೆ ಹಿತಕರವಾಗಿ ಅವಳನ್ನು ಕೂರಿಸಿದ ಮೇಲೆ) ಕೂರಲು ಇದು ತುಂಬಾ ಚೆನ್ನಾಗಿದೆ.

**ಬಿಷಪ್** : ನೀನು ಅಲ್ಲಿ ಕುಳಿತಿರುವುದನ್ನು ನೋಡಲು ನನಗೆ ಎಷ್ಟು ಸಂತೋಷವೋ!

**ಅಜ್ಜಿ** : ಇಲ್ಲಿ ಕಿಟಕಿ – ಅಲ್ಲಿ ಕನ್ನಡಿ—

**ಕಾರ್ನೀಲಿಯಾ:** ಹೌದು – ಆದ್ದರಿಂದ ನಿನಗೆ ಎಲ್ಲವೂ ಕಾಣಿಸುತ್ತದೆ!

**ಅಜ್ಜಿ:** ನೀವೆಲ್ಲಾ ಬಲು ಒಳ್ಳೆಯವರು — ಎಷ್ಟು ಗಟ್ಟಿಯಾಗಿ ಕೂಗುತ್ತೀರಿ!

**ಬಿಷಪ್:** ನಾನು ಒಳಗೆ ಹೋಗಿ ಸ್ವಲ್ಪ ಬಟ್ಟೆ ಬದಲಾಯಿಸಿಕೊಂಡು ಬರುತ್ತೇನೆ. (ಬಲಗಡೆಯಿಂದ ಹೋಗುವನು.)

**ಕಾರ್ನೀಲಿಯಾ:** ನಿನಗೆ ಇನ್ನೇನಾದರೂ ಬೇಕೆ, ಅಜ್ಜಿ?

**ಅಜ್ಜಿ:** ಏನೂ ಬೇಡಮ್ಮ – ವಂದನೆಗಳು. (ಕಾರ್ನೀಲಿಯಾ ಹಿಂಭಾಗದಿಂದ ಹೋಗುವಳು.)

**ಹಾಗ್‌ಬಾರ್ಟ್:** ಅಜ್ಜಿ, – ಅಜ್ಜಿ – ನನ್ನ ಒಳ್ಳೇ ಅಜ್ಜಿ. ನನ್ನನ್ನು ಸರಿಯಾಗಿ ತಿಳಿದುಕೊಂಡಿರುವವಳು ನೀನೊಬ್ಬಳೇ!

**ಅಜ್ಜಿ:** (ಸುತ್ತಮುತ್ತ ನೋಡಿ) ನಾವಿಬ್ಬರು ತಾನೆ ಇಲ್ಲಿರುವುದು?

**ಹಾಗ್‌ಬಾರ್ಟ್:** ಹೌದು.

**ಅಜ್ಜಿ:** ನಿನ್ನ ಮಾವ ಮಿಸೆಸ್ ಫಾಲ್ಕ್‌ಳ ಮನೆಗೆ ಭೇಟಿ ಕೊಟ್ಟನೆ?

**ಹಾಗ್‌ಬಾರ್ಟ್:** ಇಲ್ಲ. ಅದಕ್ಕೆ ಬದಲು ಅವಳಿಗೆ ಒಂದು ಕಾಗದವನ್ನು ಬರೆದ.

**ಅಜ್ಜಿ:** ಹಾಗೆ ಮಾಡಬಹುದೆಂದು ನೆನೆಸಿದ್ದೆ.

**ಹಾಗ್‌ಬಾರ್ಟ್:** ಇದು ನಾಚಿಕೆಕೇಡಲ್ಲವೆ, ಅಜ್ಜಿ? ಅವಳನ್ನು ಖಂಡಿಸುವುದಕ್ಕೆ ಮುಂಚಿತವಾಗಿ ಒಂದು ಸಾರಿಯಾದರೂ ಅವಳನ್ನು ನೋಡಿಲ್ಲ, ಮಾತಾಡಿಲ್ಲ!

**ಅಜ್ಜಿ:** ಇವರೆಲ್ಲಾ ಒಂದೇ ತರಹಾ — ನಾವಿಬ್ಬರೇ ತಾನೆ ಇಲ್ಲಿ?

**ಹಾಗ್‌ಬಾರ್ಟ್:** ನಾವಿಬ್ಬರೇ, ಅಜ್ಜಿ.

**ಅಜ್ಜಿ:** ನೀನು ಸಹನೆಯಿಂದಿರಬೇಕು, ಹಾಗ್‌ಬಾರ್ಟ್. ನೀನು ಹಿಂದೆಲ್ಲಾ ಬಹಳ ಸಹನೆ ತಾಳುತ್ತಿದ್ದೆ.

**ಹಾಗ್‌ಬಾರ್ಟ್:** ಹೌದು, ಅಜ್ಜಿ.

ಅಜ್ಜಿ : ನನ್ನ ಜೀವಾನವಧಿಯಲ್ಲಿ ನಾನು ವಿವಿಧ ನಡತೆಗಳುಳ್ಳ ಎಷ್ಟು ತಲೆಗಳನ್ನು ನೋಡಿದ್ದೇನೋ! ನನ್ನ ಕಾಲದಲ್ಲಿ ನಾವು ಹೀಗಿರಲಿಲ್ಲ – ಬೇರೆ ತರಹವಾಗಿತ್ತು. ಇತರರಲ್ಲಿ ನಮಗೆ ಸಹನೆ ಸ್ಥೈರಣೆಗಳಿದ್ದುವು.

ಹಾಗ್‌ಬಾರ್ಟ್ : ನೀನು ಕೊಟ್ಟ ಪುಸ್ತಕವನ್ನು ಓದಿ ತುಂಬಾ ಆನಂದವಾಯಿತು, ಅಜ್ಜಿ.

ಅಜ್ಜಿ : ನೀನು ಓದಿ ಆನಂದಪಡುತ್ತೀ ಅಂತ ನನಗೆ ಗೊತ್ತು. ನಾವಿಬ್ಬರೇ ತಾನೆ ಇಲ್ಲಿ ?

ಹಾಗ್‌ಬಾರ್ಟ್ : ಹೌದು, ಅಜ್ಜಿ.

ಅಜ್ಜಿ : ನೀನು ಮದುವೆ ಮಾಡಿಕೋಬೇಕೂಂತ ಇರುವ ಹುಡುಗಿಯ ಮೇಲೆ ನನಗೆ ಬಹಳ ಪ್ರೀತಿಯುಂಟಾಗಿದೆ, ಹಾಗ್‌ಬಾರ್ಟ್. ಅವಳು ನನ್ನ ಕಾಲದ ಹುಡುಗಿಯರಂತೆಯೆ ಇದ್ದಾಳೆ.

ಹಾಗ್‌ಬಾರ್ಟ್ : ನಿನ್ನ ಕಾಲದ ಹುಡುಗಿಯರು ಧೈರ್ಯಸ್ಥರಾಗಿರಲಿಲ್ಲವೆ ?

ಅಜ್ಜಿ : ಹೌದು. ಮತ್ತು ಸ್ವತಂತ್ರರಾಗಿದ್ದರು. ಈಗಿನ ಕಾಲದ ಹುಡುಗಿಯರ ತರಹವೇ ಬೇರೆ. — ನಾವಿಬ್ಬರು ತಾನೆ ಇಲ್ಲಿರುವುದು ?

ಹಾಗ್‌ಬಾರ್ಟ್ : ಹೌದು, ಅಜ್ಜಿ.

ಅಜ್ಜಿ : ನೀನು ಅವಳನ್ನು ಮದುವೆಮಾಡಿಕೊ – ಆಮೇಲೆ ನಿನ್ನ ಮತ್ತು ಅವಳ ಜೊತೆಯಲ್ಲಿ ನಾನು ಬಂದಿರುತ್ತೇನೆ – ಹುಷ್ –

ಹಾಗ್‌ಬಾರ್ಟ್ : ಈ ಮಾತು ನಿಜವೆ, ಅಜ್ಜಿ?

ಅಜ್ಜಿ : ಹುಷ್ – (ಕಿಟಕಿಯಿಂದ ಹೊರಗೆ ನೋಡುವಳು) ಜಡ್ಜಿ ರೋಸ್ವ ಅವನ ಹೆಂಡತಿಯ ಜೊತೆಯಲ್ಲಿ ಬರುತ್ತಿದಾನೆ. ಹೋಗು ಒಳಕ್ಕೆ. ನಿನ್ನ ಮಾವನಿಗೆ ತಿಳಿಸು.

ಹಾಗ್‌ಬಾರ್ಟ್ : ಆಗಲಿ.

ಅಜ್ಜಿ : ಈ ಬೆಳಗ್ಗೆ ಅವರಿಬ್ಬರೂ ಇಲ್ಲಿಗೆ ಬರಬಹುದೆಂದು ಊಹಿಸಿದ್ದೆ. ನಿನ್ನೆ ರಾತ್ರೆ ಅವರಿಬ್ಬರೂ ಹಳ್ಳಿಯಿಂದ ವಾಪಸ್ಸು ಬಂದರು.

ಹಾಗ್‌ಬಾರ್ಟ್ : ಹಾಗಾದರೆ ನಾನು ಹೋಗಿಬರುತ್ತೇನೆ, ಅಜ್ಜಿ.

ಅಜ್ಜಿ : ಹೋಗಿಬಾ ನನ್ನ ಮುದ್ದುಮಗುವೆ – (ಹಾಗ್‌ಬಾರ್ಟ್ ಹೊರಗೆ ಹೋಗುವನು. ಹಿಂದುಗಡೆ ಬಾಗಿಲು ತೆರೆಯುವುದು. ಕಾರ್ನೀಲಿಯಾ – ಜಡ್ಜ್ ರೋಸ್ಟ್ ಮತ್ತು ಮಿಸಸ್ ರೋಸ್ಟ್ ಅವರನ್ನು ಒಳಕ್ಕೆ ಕರೆತರುವಳು.)

ಕಾರ್ನೀಲಿಯಾ : ಬನ್ನಿ, ಒಳಕ್ಕೆ.

ಮಿಸಸ್ ರೋಸ್ಟ್ : ವಂದನೆಗಳು. ಇಷ್ಟು ಹೊತ್ತಿಗೆ ಮುಂಚೆ ಬಂದದ್ದಕ್ಕೆ ಕ್ಷಮಿಸಬೇಕು. ನಿನ್ನೆ ಹಳ್ಳಿಯಿಂದ ವಾಪಸ್ಸು ಬಂದೆವು. ಈ ದಿನ ನನ್ನ ಗಂಡ ಕೋರ್ಟಿಗೆ ಸ್ವಲ್ಪ ಹೋಗಬೇಕಾಗಿದೆ.

ರೋಸ್ಟ್ : ಈ ದಿನ ಕೋರ್ಟಿಗೆ ಸ್ವಲ್ಪ ಹೋಗಬೇಕಾಗಿದೆ. (ಬಿಷಪ್ ಬಲಗಡೆಯಿಂದ ಬರುವನು.)

ಬಿಷಪ್ : ಸ್ವಾಗತ.

ಮಿ. ರೋಸ್ಟ್ : ಇಷ್ಟು ಹೊತ್ತಿಗೆ ಮುಂಚೆ ಬಂದದ್ದಕ್ಕೆ ಕ್ಷಮಿಸಬೇಕು. ನಿನ್ನೆ ಹಳ್ಳಿಯಿಂದ ವಾಪಸ್ಸು ಬಂದೆವು. ಈ ದಿನ ನನ್ನ ಗಂಡ ಕೋರ್ಟಿಗೆ ಸ್ವಲ್ಪ ಹೋಗಬೇಕಾಗಿದೆ.

ರೋಸ್ಟ್ : ಈ ದಿನ ಕೋರ್ಟಿಗೆ ಸ್ವಲ್ಪ ಹೋಗಬೇಕಾಗಿದೆ.

ಬಿಷಪ್ : ನನಗೆ ಗೊತ್ತು.

ಮಿ. ರೋಸ್ಟ್ : ಆಗೋ ತನ್ನ ಕುರ್ಚಿಯ ಮೇಲೆ ಅಜ್ಜಿ ಕೂತಿದ್ದಾರೆ.

ರೋಸ್ಟ್ : ಗುಡ್‌ಮಾರ್ನಿಂಗ್, ಅಮ್ಮಾವರಿಗೆ.

ಮಿ. ರೋಸ್ಟ್ : ಗುಡ್‌ಮಾರ್ನಿಂಗ್. ಬೇಡಿ – ಏಳಬೇಡಿ.

ಅಜ್ಜಿ : ಏಳುವುದಕ್ಕೆ ಇನ್ನೂ ಕೈಲಾಗುತ್ತದೆ!

ರೋಸ್ಟ್ : ನಿಮ್ಮಷ್ಟು ನನಗೆ ಚಟುವಟಿಕೆಯಿದ್ದಿದ್ದರೆ!

ಮಿ. ರೋಸ್ಟ್ : ನಿನ್ನೆ ತಾನೆ ನನ್ನ ಗಂಡ ಕಾರ್ನೀಲಿಯಾಗೆ ಹೇಳುತ್ತಿದ್ದ—

ಅಜ್ಜಿ : ನೀನು ಅಷ್ಟು ಕಷ್ಟಪಡಬೇಕಾಗಿಲ್ಲ, ನನಗೆ ಎಲ್ಲವೂ ಚೆನ್ನಾಗಿ ಕೇಳುತ್ತೆ, (ಇತರರು ಒಬ್ಬರ ಮುಖ ಮತ್ತೊಬ್ಬರು ನೋಡಿಕೊಳ್ಳುವರು.)

ಮಿ. ರೋಸ್ಟ್ : ನಿನ್ನೆ ರಾತ್ರಿ ಕಾರ್ನೀಲಿಯಾಗೆ ನಾ ಹೇಳುತ್ತಿದ್ದೆ– ಆರಾಧನೆಯಾದನಂತರ ಅವಳ ಸಂಗಡ ಕೆಲವು ನಿಮಿಷಗಳು —

**ಅಜ್ಜಿ :** ಗೊತ್ತು, ನನಗೆ ಗೊತ್ತು.

**ರೋಸ್ಟ್ :** ತೊಂಬತ್ತು ವರ್ಷ ಮೀರಿದ್ದರೂ ಎಲ್ಲಾ ಇಂದ್ರಿಯಗಳೂ ಇಷ್ಟು ಪಟುವಾಗಿ ಇದ್ದದ್ದನ್ನು ಇನ್ನೆಲ್ಲೂ ನೋಡಿಲ್ಲವೆಂದು ನಿನ್ನೆ ಹೇಳಿದೆ —

**ಮಿ. ರೋಸ್ಟ್ :** ನಿಮ್ಮಲ್ಲಿರುವಷ್ಟು ಪಟುವಾಗಿ! ದೇಹಾರೋಗ್ಯವೂ ಕೂಡ! ಈಚೆಗೆ ನನ್ನ ಗಂಡ ಗೂರಲಿನಿಂದ ತುಂಬಾ ನರಳಿದ.

**ರೋಸ್ಟ್ :** ಈಚೆಗೆ ಗೂರಲಿನಿಂದ ನಾನು ತುಂಬಾ ನರಳಿದೆ.

**ಮಿ. ರೋಸ್ಟ್ :** ನಾನು ಕೂಡ ಹೃದಯವೇದನೆಯಿಂದ. ಅದು —

**ಅಜ್ಜಿ :** ನನ್ನ ಕಾಲದಲ್ಲಿ ಅಂಥಾ ರೋಗಗಳ ವಿಷಯವೇ ನಮಗೆ ಗೊತ್ತಿರಲಿಲ್ಲ.

**ಮಿ. ರೋಸ್ಟ್:** ಎಂತಹ ಮಧುರಸ್ವಭಾವ ಅಜ್ಜಿಯದು! ಅವಳ ಕಾಲದಲ್ಲೂ ಕೆಲವು ವೇಳೆ ಜನಗಳು ಖಾಯಿಲೆ ಬೀಳುತ್ತಿದ್ದರೆಂಬುದನ್ನು ಮರೆತಿದ್ದಾಳೆ.

**ಬಿಷಪ್ :** ಹವಾ ಬಹಳ ಹಿತವಾಗಿದೆ ಈಗ, ಅಲ್ಲವೆ ?

**ರೋಸ್ಟ್ :** ಹಿತವಾದ ಹವ! ಆದರೂ ನನಗೆ ಅರ್ಥವಾಗುವುದೇ ಇಲ್ಲ – ಹೇಗೆ ತಾನೆ ನನಗೆ — (ಬಿಷಪ್ ಅವನಿಗೋಸ್ಕರ ಒಂದು ಕುರ್ಚಿಯನ್ನು ಮುಂದಕ್ಕೆ ತಂದು ಇಡುವನು.) – ದಯವಿಟ್ಟು ಗುರುಗಳು ತೊಂದರೆ ತೆಗೆದುಕೊಳ್ಳಕೂಡದು! ಎಲ್ಲಿ, ನಾನು ತೆಗೆದುಕೊಳ್ಳುತ್ತೇನೆ.

**ಮಿ. ರೋಸ್ಟ್ :** ನನ್ನ ಗಂಡನಿಗೆ ನೆಗಡಿಯಾಗಿರಬೇಕೆಂದು ತೋರುತ್ತದೆ. (ರೋಸ್ಟ್ ಕುಳಿತುಕೊಳ್ಳುವನು.)

**ಕಾರ್ನೀಲಿಯಾ :** ನಿನ್ನೆ ಚರ್ಚಿನಲ್ಲಿ ಏನೋ ಬಹಳ ಕೊರೆತವಾಗಿತ್ತು.

**ಮಿ. ರೋಸ್ಟ್ :** ಬಾಗಿಲು ಎದುರು ಬಿಟ್ಟು ನಾವು ಒಂದು ಮೂಲೆಯಲ್ಲಿ ಕುಳಿತಿದ್ದೆವು.

**ರೋಸ್ಟ್ :** ಬಾಗಿಲು ಎದುರುಬಿಟ್ಟು ನಾವು ಒಂದು ಮೂಲೆಯಲ್ಲಿ ಕುಳಿತಿದ್ದೆವು. ಅದಕ್ಕೋಸ್ಕರಲ್ಲೇ ಕೊನೆಯಲ್ಲಿ ಗುರುಗಳ ಅಪ್ಪಣೆ ಪಡೆದು ಹಿಂತಿರುಗಲು ಆಗಲಿಲ್ಲ.

**ಬಿಷಪ್ :** ಏನು ಜನಸಂದಣಿ!

**ಮಿ. ರೋಸ್ಟ್ – ರೋಸ್ಟ್ – ಕಾರ್ನೀಲಿಯಾ :** (ಒಟ್ಟಿಗೆ) ಏನು ಜನಸಂದಣಿ!

**ಮಿ. ರೋಸ್ಟ್ :** ಗುರುಗಳು ಶ್ರಮವಹಿಸಿ ಕೈಕೊಂಡಿರುವ ಕೆಲಸಗಳಿಗೆ ಈ ಆರಾಧನೆಗಳು ಸಹಾಯ ಆಗುತ್ತದೆಯಲ್ಲವೆ!

**ರೋಸ್ಟ್ :** ಎಲ್ಲರೂ ಹಾಗೆಯೇ ಹೇಳುತ್ತಾರೆ. ಹೌದು.

**ಬಿಷಪ್ :** ಹೌದು ಎಂದರೂ ಫಲಿತಾಂಶ ಮಾತ್ರ ಮತ್ತಷ್ಟು ಕಾರ್ಯಕಾರಿಯಾಗಿದ್ದರೆ ನನ್ನ ಮನಸ್ಸಿಗೆ ಇನ್ನೂ ಸಮಾಧಾನವಾಗುತ್ತಿತ್ತು. ನಮ್ಮ ಕಾಲ ನೋಡಿದರೆ ವ್ಯಸನವಾಗುತ್ತದೆ.

**ಮೂವರೂ ಒಟ್ಟಿಗೆ :** (ಮೊದಲಿನಂತೆ) ವ್ಯಸನವಾಗುತ್ತದೆ!

**ಮಿ. ರೋಸ್ಟ್ :** ನಿನ್ನೆ ತಾನೆ ನಮ್ಮ ಕಿವಿಗೆ ಬಿತ್ತು, — ನಮ್ಮ ಸ್ನೇಹಿತರುಗಳು ಅನೇಕರನ್ನು ಕಂಡಾಗ–, ನಿಮ್ಮನ್ನು ಮೊಖ್ತಾ ಕೇಳಲು ಆಗಲಿಲ್ಲ – ಆ ವಿಷಯ ನಮಗೆ ಸ್ವಲ್ಪ ಮುಂಚಿತವಾಗಿ ತಿಳಿಯಿತು —

**ರೋಸ್ಟ್ :** ಅವಕ್ಕೋಸ್ಕರವಾಗಿಯೇ ನಾವು ಈಗ ಇಲ್ಲಿಗೆ ಬಂದಿರುವುದು. ನಾವು ಯಾವಾಗಲೂ ಮುಚ್ಚುಮರೆಯಿಲ್ಲದ ಸೀದಾ ಮನುಷ್ಯರು!

**ಮಿ. ರೋಸ್ಟ್:** ಸೀದಾ! ಸಾಫ್ ಸೀದಾ ಯಾವಾಗಲೂ! ಅದು ನನ್ನ ಗಂಡನ ಸೂತ್ರ!

**ಬಿಷಪ್ :** ಹಾಗ್‌ಬಾರ್ಟ್‌ನ ಮದುವೆ ನಿಶ್ಚಿತಾರ್ಥ ವಿಷಯ ನೀವು ಪ್ರಸ್ತಾಪಿಸುತ್ತಿರಬಹುದು.

**ಮಿ. ರೋಸ್ಟ್ ಮತ್ತು ರೋಸ್ಟ್ :** (ಜೊತೆಯಾಗಿ) ಮಿಸಸ್ ಫಾಲ್ಕ್ ಸಂಗಡ?

**ಕಾರ್ನೀಲಿಯಾ :** ಹೌದು, ಅದು ನಿಜ.

**ಮಿ. ರೋಸ್ಟ್ :** ನಿಜವೆ?

**ಕಾರ್ನೀಲಿಯಾ :** ಅದಕ್ಕೆ ಅಡ್ಡಿ ತರಲು ತನಗೆ ಹಕ್ಕಿಲ್ಲವೆಂದು ನನ್ನ ಅಣ್ಣ ನಿರ್ಧರಿಸಿದ!

**ಮಿ. ರೋಸ್ಟ್ :** ಸರಿ ತಾನೆ. ಇದನ್ನು ಇತ್ಯರ್ಥ ಮಾಡುವುದು ಗುರುಗಳಿಗೆ ಕಷ್ಟವಾಗಿರಬೇಕು.

ಬಿಷಪ್ : ಅದು ಕಷ್ಟಸಾಧ್ಯವಾಯಿತು ಎಂದೇ ಹೇಳಬೇಕು.

ಮಿ. ರೋಸ್ಟ್: ಟಾಲ್‌ಹೌಗ್ ಎಷ್ಟು ಬದಲಾಯಿಸಿದ್ದಾನೆ!

ರೋಸ್ಟ್ : ಹೌದು, ನನಗೇನೋ ತೋರುತ್ತೆ, ಮೊನ್ನೆ ತಾನೆ ಅವನು—

ಬಿಷಪ್ : ಮಿಸಸ್ ರೋಸ್ಟ್, ಈ ವಿಷಯಗಳಲ್ಲಿ ಈಗಿನ ಕಾಲದ ಯುವಕರಲ್ಲಿ ನಾವು ಕಠಿಣವಾಗಿರಲಾಗುವುದಿಲ್ಲ.

ಮಿ. ರೋಸ್ಟ್ : ಕಾಲದ ಮಹಿಮೆ ಇರಬೇಕು.

ಬಿಷಪ್ : ಅಲ್ಲದೆ ಆ ಹುಡುಗಿ ನನಗೆ ಅಪ್ರಿಯಳು ಅಥವಾ ಒಪ್ಪುವು ದಿಲ್ಲ ಎಂದು ನಾನು ಹೇಳಲಾರೆ.

ಕಾರ್ನೀಲಿಯಾ : ಅವಳ ವಿಷಯದಲ್ಲಿ ನನ್ನ ಅಣ್ಣನವರಿಗೇನೋ ಒಳ್ಳೇ ಅಭಿಪ್ರಾಯವಿದೆ — ಅವಳ ನಡತೆ ಸ್ವಲ್ಪ ಕಟ್ಟುನಿಟ್ಟಿಗೆ ಮೀರಿ ದ್ದರೂ ಅವಳು ಉತ್ಸಾಹದಿಂದ ದುಡುಕುವ ಸ್ವಭಾವವಿದ್ದರೂ ಒಳ್ಳೇ ಅಭಿಪ್ರಾಯವಿದೆ.

ಮಿ. ರೋಸ್ಟ್ : ಅವಳ ಸಾಕುತಾಯಿಯ ವಿಷಯದಲ್ಲೋ

ರೋಸ್ಟ್ : ನಿಜ, ಅವಳ ಸಾಕುತಾಯಿಯ ವಿಷಯ ?

ಕಾರ್ನೀಲಿಯಾ : ಭೇಟಿಗೋಸ್ಕರ ಅವಳ ಮನೆಗೆ ಹೋಗುವುದಿಲ್ಲ ವೆಂದು ನನ್ನ ಅಣ್ಣ ನಿರ್ಧರಿಸಿರುವನು.

ಮಿ. ರೋಸ್ಟ್ ಮತ್ತು ರೋಸ್ಟ್ : ಹಾಗೆಯೆ ?

ಮಿ. ರೋಸ್ಟ್ : ಅದನ್ನು ಕೇಳಿ ನಮಗೆ ತುಂಬಾ ಸಂತೋಷ ವಾಯಿತು.

ರೋಸ್ಟ್: ಅದನ್ನೇ ನಾವು ತಿಳಿದುಕೊಳ್ಳಬೇಕೆಂದು ಇದ್ದದ್ದು. ನಿನ್ನೆ ನಾವು ಕಂಡವರೆಲ್ಲರೂ ಆ ವಿಷಯ ತಿಳಿಯಬೇಕೆಂದಿದ್ದರು.

ಮಿ. ರೋಸ್ಟ್ : ಎಲ್ಲರೂ ಕೂಡ! ನಮಗೆ ತುಂಬಾ ಯೋಚನೆ ಯಾಗಿತ್ತು.

ಕಾರ್ನೀಲಿಯಾ ; ಅದು ಸರಿ ತಾನೆ!

ಮಿ. ರೋಸ್ಟ್ : ಇದನ್ನು ಕೇಳಿ ನಮಗೆ ಬಹಳ ಸಂತೋಷ ವಾಯಿತು.

ಅಜ್ಜಿ : (ಕಿಟಕಿಯಿಂದ ಹೊರಗೆ ನೋಡುತ್ತಾ) ಬಾಗಿಲ ಮುಂದೆ ಒಂದು ಗಾಡಿ ಬಂದಿದೆ.

ಕಾರ್ನಿಲಿಯಾ: ಗಾಡಿ ಶಬ್ದ ನನಗೂ ಕೇಳಿಸಿದ ಹಾಗೆ ಆಯಿತು. (ಏಳುವಳು.)

ಅಜ್ಜಿ : ಒಬ್ಬ ಹೆಂಗಸು ಗಾಡಿಯಿಂದ ಇಳಿಯುತ್ತಿದ್ದಾಳೆ.

ಮಿ. ರೋಸ್ಟ್ : ಒಬ್ಬ ಹೆಂಗಸೆ! ದೇವರೇ ಗತಿ! ಒಂದು ವೇಳೆ ಅವಳೇ ಏನಾದರೂ ಇರಬಹುದೊ? (ಏಳುವಳು.)

ರೋಸ್ಟ್ : ಏನು ನೀನು ಹೇಳುತ್ತಿರುವುದು? (ಏಳುವನು.)

ಕಾರ್ನಿಲಿಯಾ: ಮುಖದ ಮೇಲೆ ಒಂದು ತೆಳ್ಳನಾದ ಬುರುಕಿ ಇದೆ.

ಮಿ. ರೋಸ್ಟ್ : ನನಗೇನೋ ತೋರುತ್ತೆ—(ತನ್ನ ಗಂಡನನ್ನು ಕುರಿತು) ನೀನು ನೋಡು ಪ್ರಿಯ; ನಿನಗೆ ಅವಳು ಗೊತ್ತು.

ರೋಸ್ಟ್ : ಅದು ಅವಳೇಯೋ — ಅವಳ ಗಾಡಿ ಹೊಡೆಯುವವನು ಹ್ಯಾರ್ಸ್ ನನಗೆ ಗೊತ್ತು.

ಬಿಷಪ್ : ಅದೇ ಗಾಡಿಯಲ್ಲಿ ಮಿಸ್ ಆಗಟ್ ಬಂದಿರಬಹುದು!

ಕಾರ್ನಿಲಿಯಾ: ಮಿಸ್ ಆಗಟ್ ಅಲ್ಲ. ಇಷ್ಟು ಹೊತ್ತಿಗೆ ಅವಳು ಮನೆ ಒಳಕ್ಕೆ ಬಂದಿರಬೇಕು. ನಾವೇನು ಮಾಡಬೇಕು ಈಗ?

ಮಿ. ರೋಸ್ಟ್ : ಗುರುಗಳ ಕಾಗದ ಅವಳಿಗೆ ತಲಪಿರಲಿಲ್ಲವೆ?

ಬಿಷಪ್ : ತಲಪಿರಬೇಕು, ಈ ಬೆಳಗ್ಗೆ.

ಮಿ. ರೋಸ್ಟ್ : ಕಾಗದ ಬರೆದಿದ್ದರೂ ಕೂಡ — ?

ಬಿಷಪ್ : ಕಾಗದ ಬರೆದಿದ್ದಕ್ಕೋಸ್ಕರಲೇ ಎಂತ ಕಾಣುತ್ತೆ – ಹುಂ– ಕಾರ್ನಿಲಿಯಾ, ನೀನು ಕೆಳಗೆ ಹೋಗಿ —

ಕಾರ್ನಿಲಿಯಾ: ಏನು ಬಂದರೂ ಬರಲಿ. ನಾನು ಹೋಗುವುದಿಲ್ಲ. ನಾನು ಒಪ್ಪುವುದಿಲ್ಲ.

ಮಿ. ರೋಸ್ಟ್ : (ಗಂಡನನ್ನು ಕುರಿತು) ಬಾ, ಪ್ರಿಯ–ಜಾಗ್ರತೆ ಮಾಡು. ನಾವು ಹೊರಟುಹೋಗೋಣ. (ತನ್ನ ಛತ್ರಿಯನ್ನು ಹುಡುಕುವಳು.) ನನ್ನ ಛತ್ರಿ ಎಲ್ಲಿ?

ರೋಸ್ಟ್ : (ಸಣ್ಣ ದನಿಯಲ್ಲಿ) ಸ್ವಲ್ಪ ತಾಳಲಾಗುತ್ತದೆಯೆ, ರೋಸ್ಟ್?

ರೋಸ್ಟ್: ಓಹೋ—

ಮಿ ರೋಸ್ಟ್ : ನನ್ನ ಛತ್ರಿ– ನನ್ನ ಛತ್ರಿ ಎಲ್ಲೊ ಕಾಣೆನಲ್ಲಾ ?

ರೋಸ್ಟ್ : ನಿನ್ನ ಕೈಯಲ್ಲೇ ಇದೆ. ಅದಕ್ಕೋಸ್ಕರ ಅದು ನಿನಗೆ ಕಾಣಿಸುವುದಿಲ್ಲ!

ಮಿ. ರೋಸ್ಟ್ : ಹೌದು, ಇಲ್ಲೇ ಇದೆ. ನನ್ನ ಮನಸ್ಸು ಗಲಿಬಿಲಿಯಾಗಿದೆ ಎಂಬುದು ಇದರಿಂದಲೇ ತಿಳಿಯುತ್ತೆ. ಜಾಗ್ರತೆ ಮಾಡು. ನಾವು ಹೊರಟುಹೋಗೋಣ. ಈ ಬಾಗಿಲಿನಿಂದ ಹೋಗಬಹುದಲ್ಲವೆ?

ರೋಸ್ಟ್ : ಅದು ಗುರುಗಳು ಮಲಗುವ ಚಿಕ್ಕಮನೆಯ ಬಾಗಿಲು.

ಮಿ. ರೋಸ್ಟ್ : ಆದರೇನು, ನೀನು ನನ್ನ ಜೊತೆಯಲ್ಲಿದ್ದರೆ? ನಾವೇನು ಈ ಹೆಂಗಸನ್ನು ನೋಡಬೇಕೆ? ಏಕೆ ಸುಮ್ಮನೆ ನಿಂತಿದ್ದೀಯೆ? ನಿಜವಾಗಿಯೂ ನೀನು ಅವಳನ್ನೇನಾದರೂ — ?

ರೋಸ್ಟ್ : ಸ್ವಲ್ಪ ತಡೆಯೋಣ.

ಮಿ. ರೋಸ್ಟ್ : ಏನು ? ಅವಳೊಡನೆ ಮಾತನಾಡುವುದಕ್ಕೋ? ಓ – ಓ – ಏನು ಗಂಡಸರು! — ನಿಮ್ಮ ಚಾಲೇ ಹಾಗೆ!

ಬಿಷಪ್ : ಗೊತ್ತಿರಬೇಕಲ್ಲವೆ, ಯಾರಾದರೂ ಒಬ್ಬರು — ಕಾರ್ನೀಲಿಯಾ ?

ಕಾರ್ನೀಲಿಯಾ : ಸರ್ವ ಸಂಪತ್ತು ಕೊಟ್ಟರೂ ಇಲ್ಲ. ಒಂದಂಗುಲ ಇಲ್ಲಿ ಬಿಟ್ಟು ಕದಲುವುದಿಲ್ಲ.

ಅಜ್ಜಿ : ಗ್ರ್ಯಾಕಸ್!

ಬಿಷಪ್ : ಏನು, ಅಜ್ಜಿ ?

ಮಿ. ರೋಸ್ಟ್ : ಮುದುಕಮ್ಮ ಈಗ ಅಡ್ಡಬರುತ್ತಿದ್ದಾಳೆ. ನಾನು ಊಹಿಸಿದ್ದೂ ಹಾಗೆಯೇ!

ಅಜ್ಜಿ : ನಯವಾದ ನಡತೆಗೆ ಎಲ್ಲರೂ ಮನ್ನಣೆ ಕೊಡಬೇಕು.

ಬಿಷಪ್ : ಸರಿ, ನಿನ್ನ ಮಾತು ಒಪ್ಪಿದೆ. (ಚಿಕ್ಕಮನೆಯ ಹಿಂಭಾಗಕ್ಕೆ ಹೋಗುವನು ; ಆ ಹೊತ್ತಿಗೆ ಸರಿಯಾಗಿ ಬಾಗಿಲು ತಟ್ಟಿದ ಶಬ್ದವಾಗುವುದು.) ಒಳಗೆ ಬನ್ನಿ. (ಬಾಗಿಲು ತೆರೆದು ಲಿಯೊನಾರ್ಡಾ ಪ್ರವೇಶಿಸುವಳು.)

**ಮಿ. ರೋಸ್ಟ್:** ಅವಳೇ ಅದು !

**ರೋಸ್ಟ್:** ಸುಮ್ಮನಿರು.

**ಮಿ. ರೋಸ್ಟ್:** ಆದರೆ ನಾವು ಇಲ್ಲಿರುವುದಕ್ಕಿಂತ — ?

**ಲಿಯೊನಾರ್ಡಾ:** ಕ್ಷಮಿಸಬೇಕು. ಬಿಷಪ್‌ರನ್ನು ಕುರಿತು ನಾನು ಮಾತಾಡುತ್ತಿರುವುದು ?

**ಬಿಷಪ್:** ಹೌದು, ನಾನು ಸ್ವಾಗತಿಸುತ್ತಿರುವುದು — ?

**ಲಿಯೊನಾರ್ಡಾ:** ಮಿಸಸ್ ಫಾಲ್ಕ್.

**ಬಿಷಪ್:** ಇಲ್ಲಿರುವವರ ಗುರುತು ಹೇಳುತ್ತೇನೆ; ನನ್ನ ಸೋದರಿ, ಜಡ್ಜಿ ಮಿಸ್ಟರ್ ರೋಸ್ಟ್, ಮಿಸಸ್ ರೋಸ್ಟ್. ಈಕೆ –

**ಲಿಯೊನಾರ್ಡಾ:** "ಅಜ್ಜಿ", ಅವರ ವಿಷಯ ನಾನು ಕೇಳಿದ್ದೇನೆ ಅಂತ ಕಾಣುತ್ತೆ.

**ಬಿಷಪ್:** ಅಜ್ಜಿ, ಮಿಸಸ್ ಫಾಲ್ಕನ್ನು ನಿನಗೆ ಒಪ್ಪಿಸುತ್ತೇನೆ.

**ಅಜ್ಜಿ:** (ಎದ್ದುನಿಂತು) ನಿನ್ನನ್ನು ನೋಡಲು ಬಹಳ ಸಂತೋಷ.

**ಮಿ. ರೋಸ್ಟ್ ಮತ್ತು ಕಾರ್ನೀಲಿಯಾ:** ಅವಳು ಏನು ಹೇಳುತ್ತಿರುವುದು ?

**ಅಜ್ಜಿ:** ಈ ಸಂಸಾರದ ಹಿರಿತಲೆಯಾದ ನಾನು — ನನ್ನಲ್ಲಿ ಉಳಿದಿರುವುದು ಅದು ಒಂದೇ ಗುಣ ಈಗ ಅಂತ ಕಾಣುತ್ತೆ – ನಿನಗೆ ಸ್ವಾಗತವನ್ನು ಬಯಸುತ್ತೇನೆ. (ಲಿಯೊನಾರ್ಡಾ ಆಶ್ಚರ್ಯದಿಂದ ಬೆದರುವಳು; ತತ್‌ಕ್ಷಣವೇ ಮಂಡಿಯೂರಿ ಅಜ್ಜಿಯ ಕೈಮೇಲೆ ಮುದ್ದಿಡುವಳು.)

**ಮಿ. ರೋಸ್ಟ್:** ದೇವರೇ ಗತಿ ! ಇನ್ನು ಮುಂದೇನು !

**ಕಾರ್ನೀಲಿಯಾ:** ಮುಂದೇನು ?

**ಮಿ. ರೋಸ್ಟ್:** ನಾವು ಹೋಗೋಣ.

**ರೋಸ್ಟ್:** (ಸಣ್ಣ ದನಿಯಲ್ಲಿ) ಗುರುಗಳು ಏನು ಹೇಳುತ್ತಾರೆ — ?

**ಬಿಷಪ್:** (ಹಾಗೆಯೇ ಸಣ್ಣ ದನಿಯಲ್ಲಿ) ಏನೂ ಬೇಡ ನೀನಿರುವುದು ! ನಾನೆ ಕಾರ್ಯವನ್ನು ನೋಡಿಕೊಳ್ಳಬೇಕು.

**ರೋಸ್ಟ್:** ಹಾಗಾದರೆ ನಾನು ಹೋಗಿಬರುತ್ತೇನೆ.

**ಬಿಷಪ್ :** ನೀನು ಬಂದದ್ದಕ್ಕೆ ತುಂಬಾ ವಂದನೆಗಳು. ಅಲ್ಲದೆ ನೀನು ಮುಚ್ಚುಮರೆಯಿಲ್ಲದೆ ಇದ್ದದ್ದು ಬಹಳ ಸಂತೋಷ.

**ಮಿ. ರೋಸ್ಟ್ :** ನಾವು ಯಾವಾಗಲೂ ಹಾಗೆಯೇ ಗುರುಗಳೆ. ಹೋಗಿಬರುತ್ತೇವೆ.

**ಕಾರ್ನೀಲಿಯಾ :** (ಅವರು ಅವಳ ಬಳಿ ಬರುತ್ತಿರುವುದನ್ನು ನೋಡಿ) ನಾನೂ ಬಾಗಿಲತನಕ ಬಂದು ನಿಮ್ಮನ್ನು ಕಳುಹಿಸಿಕೊಡುತ್ತೇನೆ.

**ರೋಸ್ಟ್** (ಅಜ್ಜಿಯನ್ನು ಕುರಿತು) ಇಂದಿನ ಹಾಗೆಯೇ ನೀವು ಚಿರಕಾಲ ಹೀಗೆಯೇ ಆರೋಗ್ಯವಾಗಿರಬೇಕೆಂದು ನನ್ನ ಹಾರೈಕೆ.

**ಮಿ. ರೋಸ್ಟ್:** ನಾವು ಹೋಗಿಬರುವೆವು, ತಾಯಿ. ಬೇಡಿ, ಬೇಡಿ-ಏಳಬೇಡಿ. ನಿಮಗೆ ಆಗಲೇ ಬಹಳ ಆಯಾಸವಾಗಿರಬೇಕು.

**ಅಜ್ಜಿ :** ನಿಮಗೂ ಅದನ್ನೇ ಬಯಸುತ್ತೇನೆ.

**ಮಿ. ರೋಸ್ಟ್ ಮತ್ತು ರೋಸ್ಟ್ :** ಏನು ಹೇಳಿದಿರಿ ?

**ಬಿಷಪ್ :** ನೀವು ಹೋಗಿಬರುವ ಮುನ್ನ ಸ್ವಸ್ತಿ ಅಂತ ಹೇಳಿದಿರಿ ಎಂದು ತಿಳಿದುಕೊಂಡು ಹಾಗೆಂದಳು.

**ಮಿ. ರೋಸ್ಟ್ ಮತ್ತು ರೋಸ್ಟ್ :** ಓಹೋ – ತಿಳಿಯಿತು — ತಿಳಿಯಿತು. (ಅವರು ನಗುವರು. ಹೊರಗೆ ಹೋಗುತ್ತಾ ದಾರಿಯಲ್ಲಿ ಲಿಯೊನಾರ್ಡಾ ಳಿಗೆ ಪ್ರಣಾಮಸೂಚನಾಪೂರ್ವಕವಾಗಿ ತಲೆಬಾಗಿ ಮುಂದೆ ಸರಿಯುವರು. ಅವರನ್ನು ಬೀಳ್ಕೊಳ್ಳಲು ಕಾರ್ನೀಲಿಯಾ ಮತ್ತು ಬಿಷಪ್ ಬಾಗಿಲ ತನಕ ಹೋಗುವರು. ಅನಂತರ ಬಿಷಪ್ ಒಳಕ್ಕೆ ವಾಪಸ್ಸು ಬರುವನು.)

**ಬಿಷಪ್ :** (ಲಿಯೊನಾರ್ಡಾ ಕುರಿತು) ಕೂತುಕೊಳ್ಳಬೇಕು.

**ಲಿಯೊನಾರ್ಡಾ:** ಗುರುಗಳು ಈ ದಿನ ಒಂದು ಕಾಗದವನ್ನು ಕಳುಹಿಸಿದಿರಿ. (ಬಿಷಪ್‌ನಿಂದ ನಿರೀಕ್ಷಿತವಾದ ಉತ್ತರ ಬರುವುದಿಲ್ಲ. ಅವನು ಸುಮ್ಮನಿರುವನು.) ಆ ಕಾಗದದಲ್ಲಿ ನಿಮ್ಮ ಕೈಲಾದಷ್ಟು ಮರ್ಯಾದೆಯಿಂದ-ನಿಮ್ಮ ಸಂಸಾರದವರು ನನ್ನೊಡನೆ ಯಾವ ವ್ಯವಹಾರವನ್ನೂ ಬಯಸು ವುದಿಲ್ಲವೆಂದು ನಿರ್ದಿಷ್ಟವಾಗಿ ತಿಳಿಸಿದ್ದೀರಿ.

**ಬಿಷಪ್ :** ಮಿಸೆಸ್ ಫಾಲ್ಕ್, ಅಂಥಾ ಇಚ್ಛೆ ನಿನಗೆ ಈಗ ಅಥವಾ ಪೂರ್ವದಲ್ಲಿ ಯಾವಾಗಲೂ ಇದ್ದಂತೆ ನನಗೆ ಕಾಣುವುದಿಲ್ಲ.

**ಲಿಯೊನಾರ್ಡಾ:** ಕಾಗದದಲ್ಲಿ ಬರೆದಿರುವುದರ ಮುಖ್ಯ ಅಭಿಪ್ರಾಯ ವೇನೆಂದರೆ, ನನ್ನ ಆಸ್ತಿಪಾಸ್ತಿಗಳನ್ನೆಲ್ಲಾ ಇಬ್ಬರು ಮಕ್ಕಳ ಹೆಸರಿಗೆ ಬರೆದು ಬಿಟ್ಟು, ನಾನು ಎಲ್ಲಿಯಾದರೂ ತಲೆತಪ್ಪಿಸಿಕೊಂಡು ಹೋಗಬೇಕೆಂದು ಕಾಣುತ್ತೆ.

**ಬಿಷಪ್:** ನೀನು ಹಾಗೆ ಅರ್ಥಮಾಡಿಕೊಳ್ಳಬೇಕೆಂದಿದ್ದರೆ ಆಗ ಬಹುದು, ಮಿಸಸ್ ಫಾಲ್ಕ್.

**ಲಿಯೊನಾರ್ಡಾ:** ನಿಮ್ಮ ಸೋದರಅಳಿಯ ನಿಮಗೆ ಆಗಲೇ ತಿಳಿಸಿರ ಬಹುದು. ನನ್ನ ಸ್ಥಿತಿಯಲ್ಲಿ, ಇಲ್ಲಿ ಒಂದು ಸಂಸಾರ ಮತ್ತು ನಾನಿರುವ ಕಡೆ ಮತ್ತೊಂದು ಸಂಸಾರ ನಡಸಲಾಗುವುದಿಲ್ಲ.

**ಬಿಷಪ್:** ಸರಿ, ಒಪ್ಪೋಣ. ಆದರೆ ಆಸ್ತಿಗಳನ್ನೆಲ್ಲಾ ಮಾರ ಬಹುದಲ್ಲವೆ?

**ಲಿಯೊನಾರ್ಡಾ:** ಗುರುಗಳ ಸೂಚನೆಯೇನು? ಏನು, ಎಲ್ಲವನ್ನೂ ಮಾರಿ ನಾವು ಮೂರು ಮಂದಿಯೂ ಇಲ್ಲಿ ಬಿಟ್ಟು ಬೇರೆ ಊರಿಗೆ ಹೋಗ ಬೇಕೆಂದೆ? ಬೇಕಾದರೆ ಹಾಗೆ ಮಾಡಲೂ ಸಾಧ್ಯ. ಆದರೆ ಈಗ ತಾನೆ ಆಸ್ತಿಗಳ ಬೆಲೆ, ಹೊಸದಾಗಿ ಬರುವ ರೈಲ್ವೆಯ ದೆಸೆಯಿಂದ ಏರುತ್ತಿದೆ. ಅದು ಹೋಗಲಿ. ಈ ಆಸ್ತಿಗಳು ನಮ್ಮ ಸಂಸಾರದಲ್ಲಿ ಬಹುಕಾಲದಿಂದಲೂ ಇವೆ. ಈಗ — ?

**ಬಿಷಪ್:** ಆಸ್ತಿ ಬಹಳ ಒಳ್ಳೆಯದು!

**ಲಿಯೊನಾರ್ಡಾ:** ನಮಗೆ ಪ್ರಾಣದಂತೆ ಪ್ರಿಯವಾದ ಆಸ್ತಿ.

**ಬಿಷಪ್:** ಈಗ ಒದಗಿರುವ ಪರಿಸ್ಥಿತಿಯನ್ನು ನೋಡಿದರೆ ನನಗೆ ತುಂಬಾ ವ್ಯಸನವಾಗುತ್ತೆ.

**ಲಿಯೊನಾರ್ಡಾ:** ನಿಮ್ಮ ಮನಸ್ಸಿನ ಅದೇ ಮರುಕ ಗುರುಗಳ ಇತ್ಯರ್ಥವನ್ನು ಕೂಡಾ ಬದಲಾಯಿಸಬಹುದೆಂದು ನಾನು ಎಣಿಸ ಬಹುದೆ?

**ಬಿಷಪ್:** ಮರುಕಕ್ಕೂ – ನನ್ನ ಇತ್ಯರ್ಥಕ್ಕೂ ಕೊಂಚವೂ ಕೂಡ ಸಂಬಂಧವಿಲ್ಲ.

**ಲಿಯೊನಾರ್ಡಾ:** ಕಳೆದ ಎಂಟು ವರ್ಷಗಳಲ್ಲಿ ನಿಮ್ಮ ಮನಸ್ಸನ್ನು

ನಾನು ಯಾವಾಗಲಾದರೂ ನೋಯಿಸಿದೇನೆಯೆ? ಅಥವಾ ಮತ್ತ್ಯಾರ ಮನಸ್ಸನ್ನಾದರೂ — ?

**ಬಿಷಪ್** : ಹಾಗೆಂದಿಗೂ ಇಲ್ಲವೆಂದು ನಿನಗೇ ಚೆನ್ನಾಗಿ ತಿಳಿದಿರುತ್ತದೆ!

**ಲಿಯೊನಾರ್ಡಾ** : ಅಥವಾ ನಾನು ನನ್ನ ಸೋದರಸೊಸೆಯನ್ನು ಸಾಕಿದ ರೀತಿಯಲ್ಲಿ — ?

**ಬಿಷಪ್** : ನಿನ್ನ ಸೋದರಸೊಸೆ ನಿನಗೆ ಒಳ್ಳೆ ಹೆಸರು ತಂದಿದಾಳೆ, ಅಮ್ಮಾ!

**ಲಿಯೊನಾರ್ಡಾ** : ಹಾಗಾದರೆ ನನ್ನ ಆಳುಕಾಳುಗಳು ನನ್ನ ವಿಷಯದಲ್ಲಿ ಏನಾದರೂ ಚಾಡಿ ಹೇಳಿದ್ದಾರೆಯೆ? ಅಥವಾ ಅವರ ನಡತೆಯ ವಿಷಯ ಇನ್ನ್ಯಾರಾದರೂ ಏನಾದರೂ ಹೇಳಿದ್ದಾರೆಯೆ?

**ಬಿಷಪ್** : ಹುಳುಕು ಹುಡುಕುವ ಸ್ವಭಾವವುಳ್ಳವರೂ ಕೂಡ ಹಾಗೆ ಮಾಡಿಲ್ಲಮ್ಮ! ಆ ವಿಷಯದಲ್ಲಿ ನೀನು ಸರ್ವರಿಗೂ ಆದರ್ಶಪ್ರಾಯಳಾಗಿ ನಡೆದುಕೊಂಡಿದ್ದೀಯೆ!

**ಲಿಯೊನಾರ್ಡಾ** : ಹಾಗಾದರೆ ಏನಿರಬಹುದು ನನ್ನ ಮೇಲಿನ ಆಪಾದನೆ?

**ಬಿಷಪ್** : ಹೆಂಗಸಿನ ಮುಂದೆ ಹೇಗೆ ತಾನೆ ನಾನು — ?

**ಲಿಯೊನಾರ್ಡಾ** : ನಿಮ್ಮ ಸಹಾಯಕ್ಕಾಗಿ ನಾನು ಹೇಳಲಿ? ನನ್ನ ಗತಜೀವಿತವಲ್ಲವೆ?

**ಬಿಷಪ್** : ನೀನೇ ಹೇಳುತ್ತಿರುವುದರಿಂದ — ಹೌದು.

**ಲಿಯೊನಾರ್ಡಾ** : ನಿಮ್ಮ ಅಭಿಪ್ರಾಯವೇನು? ಗತಜೀವಿತಕ್ಕೆ ಒಂದು ಪರಿಹಾರ ಅಥವಾ ಪ್ರಾಯಶ್ಚಿತ್ತವಿಲ್ಲವೆ? ಅಲ್ಲದೆ ನನ್ನ ಹಿಂದಿನ ಜೀವನದ ವಿಷಯ ನಿಮಗೆ ಒಂದೂ ತಿಳಿಯದು —

**ಬಿಷಪ್** : ನಿನಗೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವ ಇಚ್ಛೆ ಇದೆ ಎಂಬುದೇ ಕಾಣುವುದಿಲ್ಲ, ಮಿಸಸ್ ಫಾಲ್ಕ್.

**ಲಿಯೊನಾರ್ಡಾ** : ನಿಮ್ಮ ಅರ್ಥ—ನಾನು ಆತ್ಮನಿವೇದನಕ್ಕೆ ಅಥವಾ ಚರ್ಚಿಗೆ ಆರಾಧನೆಗೆ ಬರಲಿಲ್ಲವೆಂಬುದು ತಾನೆ?

**ಬಿಷಪ್** : ಹೌದು.

**ಲಿಯೊನಾರ್ಡಾ**: ಆತ್ಮವಂಚನೆಯ ಮಾರ್ಗದಿಂದ ಪ್ರಾಯಶ್ಚಿತ್ತವೆ?

**ಬಿಷಪ್** : ಹಾಗೆಂದಿಗೂ ಇಲ್ಲ. ಆದರೆ ನಾನು ಹೇಳುವ ಒಂದೇ ಮಾರ್ಗವೇ ಸರಿಯಾದ ಮಾರ್ಗ.

**ಲಿಯೊನಾರ್ಡಾ**: ಬೇರೆ ಮಾರ್ಗಗಳಿವೆ. ಶರೀರದಂಡನೆ ಮತ್ತು ಧರ್ಮಕಾರ್ಯಗಳು— ಇವುಗಳನ್ನು ನಾನು ಅನುಸರಿಸುತ್ತೇನೆ.

**ಬಿಷಪ್** : ಮಿಸಸ್ ಫಾಲ್ಕ್, "ಒಂದೇ ಮಾರ್ಗ" ಎಂದು ನಾನು ಹೇಳಿದ್ದು. ನಿನ್ನ ಮಾರ್ಗದಲ್ಲಿ ಚಿತ್ತಾಕರ್ಷಣದ ಅಪಾಯಗಳಿಂದ ನಿನಗೆ ರಕ್ಷಣೆಯಿಲ್ಲ.

**ಲಿಯೊನಾರ್ಡಾ**: ನೀವು ಹಾಗೆ ಹೇಳುವುದನ್ನು ಕೇಳಿದರೆ ನಿಮ್ಮ ಮನಸ್ಸಿನಲ್ಲಿ ಏನೋ ಒಂದು ಅನುಮಾನವಿದೆ ಎಂದು ತೋರುತ್ತೆ. ನಿಮ್ಮ ಸಹಾಯಕ್ಕೋಸ್ಕರ ಪುನಃ ಅದೇನು ಹೇಳಲಿ? ಅದು ಜನರಲ್ ರೋಸೆನ್‌ಗೆ ಸಂಬಂಧಿಸಿದ್ದು.

**ಬಿಷಪ್** : ಹೌದು, ಅದೇ.

**ಲಿಯೊನಾರ್ಡಾ**: ಹಾಗಾದರೆ ಅವನನ್ನು ದೂರ ಕಳುಹಿಸಿಬಿಡಬೇಕು ಎನ್ನುವಿರಾ?

**ಬಿಷಪ್** : ಹೌದು.

**ಲಿಯೊನಾರ್ಡಾ**: ನಾನು ಹಾಗೆ ಮಾಡಿದರೆ ಅವನ ಕತೆ ಮುಗಿಯಿತು. ಅವನಲ್ಲಿ ಶಕ್ತಿಸಾಮರ್ಥ್ಯಾದಿ ಗುಣಗಳಿವೆ.

**ಬಿಷಪ್** : ನನಗೆ ಅರಿವಿಲ್ಲದ ಇತರರ ವಿಷಯಗಳಲ್ಲಿ ತಲೆಯಿಡಲು ನನಗೆ ಹಕ್ಕಿಲ್ಲ ಮತ್ತು ನನಗೆ ಬೇಡವಾಗಿದೆ. ಆದರೆ ಜನರಲ್ ರೋಸೆನ್ ಅಂಥಾ ಮನುಷ್ಯನನ್ನು ತಿದ್ದಿ ದಾರಿಗೆ ತರುವ ವ್ಯಕ್ತಿಯು ಸಂಶಯಾಸ್ಪದವಿಲ್ಲದ ಶೀಲಸ್ವಭಾವಗಳಿಂದ ಕೂಡಿರಬೇಕೆಂದು ನಾನು ಹೇಳುತ್ತೇನೆ.

**ಲಿಯೊನಾರ್ಡಾ**: ನೀವು ಹೇಳುವುದು ಸರಿ.

**ಬಿಷಪ್** : ಮಿಸಸ್ ಫಾಲ್ಕ್, ನೀನು ಇದಕ್ಕೋಸ್ಕರ ತೆರಬಾರದಷ್ಟು ಪಣ – ಅಥವಾ ಪಡಬಾರದಷ್ಟು ಶ್ರಮ ವೆಚ್ಚಮಾಡುತ್ತಿದ್ದೀಯೆ. ಸಾರ್ಥಕವಾಗುತ್ತದೆಯೋ, ಇಲ್ಲವೋ ಅದನ್ನು ಹೇಳಲಾಗುವುದಿಲ್ಲ!

**ಲಿಯೊನಾರ್ಡಾ:** ಇದ್ದರೂ ಇರಬಹುದು. ಆದರೆ ಇದಕ್ಕೆ ಸಂಬಂಧಿಸಿದ ಮತ್ತೊಂದು ವಿಚಾರವಿದೆ, ನೀವು ಮರೆತಿರಬಹುದು.

**ಬಿಷಪ್ :** ಅದೇನದು ?

**ಲಿಯೊನಾರ್ಡಾ:** ದಯೆ – ಅನುಕಂಪ.

**ಬಿಷಪ್ :** ಸರಿ. ಒಪ್ಪಬೇಕು. ನಿನ್ನ ಭಾವನೆ ಹಾಗಿದ್ದರೆ ನಾನೇನೂ ಹೇಳಲಾರೆ.

**ಲಿಯೊನಾರ್ಡಾ:** ಅದರಲ್ಲಿ ನಿಮಗೆ ನಂಬಿಕೆ ಇಲ್ಲವೆ ?

**ಬಿಷಪ್ :** ಇದು ನನ್ನೊಬ್ಬನಿಗೆ ಸಂಬಂಧಿಸಿ ಇತ್ಯರ್ಥವಾಡಬೇಕಾಗಿದ್ದರೆ ಅದೇ ಬೇರೆ ವಿಷಯ. ಆದರೆ, ಮಿಸಸ್ ಫಾಲ್ಕ್, ಇದು ಹಾಗಲ್ಲ.

**ಲಿಯೊನಾರ್ಡಾ:** ಅಪಯಶಸ್ಸು ಬಂದರೂ ಒಳ್ಳೆಯದನ್ನು ಮಾಡಬೇಕೆಂಬ ತತ್ತ್ವವನ್ನು ನೀವು ಒಪ್ಪುವಿರಲ್ಲವೆ ?

**ಬಿಷಪ್ :** ನಿಸ್ಸಂದೇಹವಾಗಿ ಒಪ್ಪುತ್ತೇನೆ.

**ಲಿಯೊನಾರ್ಡಾ :** ಹಾಗಾದರೆ, ಆ ತತ್ತ್ವವನ್ನು ಗುರುಗಳು ತಮಗೇ ಅನ್ವಯಿಸುವುದಕ್ಕಾಗುವುದಿಲ್ಲವೆ ? ನನ್ನ ಭೇಟಿಗೋಸ್ಕರ ನೀವು ನನ್ನ ಮನೆಗೆ ಬಂದರೆ ಸ್ವಲ್ಪ ಕಾಲ ನಿಮ್ಮ ಶಿಷ್ಯ ಸಮೂಹದ ನಂಬಿಕೆ ಶಿಥಿಲವಾಗಬಹುದು. ಆದರೇನು ? ಈಗ ನನ್ನ ಬಾಯಿಂದಲೆ ತಾವು ಕೇಳಿದ್ದೀರಿ–ನನ್ನ ವಿಷಯದಲ್ಲಿ ಹರಡಿದ್ದ ಸುದ್ದಿಗಳೆಲ್ಲ ಸುಳ್ಳು ಎಂಬುದಾಗಿ. ಆದ್ದರಿಂದ ನೀವು ನಾನು ಮಾಡುತ್ತಿರುವ ಕೆಲಸಗಳನ್ನು ಒಪ್ಪಿ ನನಗೆ ತಕ್ಕ ಬೆಂಬಲವನ್ನು ಕೊಡಬೇಕು. ಹಾಗೆ ಮಾಡುವುದರಿಂದ ನಮ್ಮ ಹುಡುಗರಿಗೆ ತುಂಬಾ ಒಳ್ಳೆಯದನ್ನು ಮಾಡಿದಂತಾಗುತ್ತೆ. ನನ್ನನ್ನು ಇಲ್ಲಿಂದ ಓಡಿಸದೆ, ನನಗೂ ಒಳ್ಳೆಯದನ್ನು ಮಾಡಿದಂತಾಗುತ್ತೆ. ಕೆಲವು ವರ್ಷಗಳಿಂದ ನಾನು ಇತರರಿಗಾಗಿಯೇ ಜೀವಿಸುತ್ತಿದ್ದೇನೆ. ಏನನ್ನೂ ತ್ಯಾಗ ಮಾಡದೆ ಹಾಗೆ ಜೀವಿಸಿಕೊಂಡಿರುವುದು ಅಸಂಭವ — ಅದರಲ್ಲೂ, ಗುರುಗಳು ಲಾಲಿಸಬೇಕು — ನಾನಾದರೋ ನನ್ನ ಜೀವಮಾನವು ಇನ್ನೂ ಸಂಪೂರ್ಣವಾಗಿ ಮುಗಿದಿಲ್ಲವೆಂದು ನಂಬಿರುವವಳು !

**ಬಿಷಪ್ :** ನೀನು ಯೌವ್ವನಪುತ್ಥಳಿಯಾಗಿ ನನಗೆ ಕಾಣುತ್ತಿರುವೆ.

**ಲಿಯೊನಾರ್ಡಾ:** ಓ, ಹಾಗಲ್ಲ. ಆದರೂ ತುಂಬಾ ಹಣಗಾಡದೆ ಏನೂ ಮಾಡುವುದಕ್ಕಾಗಲಿಲ್ಲ. ಅದಕ್ಕೆ ಈಗ ನಾನು ಸ್ವಲ್ಪ ಪ್ರತಿಫಲ ನಿರೀಕ್ಷಿಸುತ್ತೇನೆ. ಯಾರು ತಾನೆ ಹಾಗೆ ಮಾಡುವುದಿಲ್ಲ? ನಾನು ಯಾರಿಗೋಸ್ಕರ ನನ್ನ ಸರ್ವಸ್ವವನ್ನೂ ಮೀಸಲಾಗಿಟ್ಟು ಶ್ರಮಪಟ್ಟೆನೋ ಅವರ ಜೊತೆಯಲ್ಲಿ ನನ್ನ ಜೀವಮಾನವನ್ನು ಕಳೆಯಬೇಕೆಂದಿದ್ದೇನೆ. ಅವರ ಸುಖ ಸಂಪತ್ತುಗಳಲ್ಲಿ ನನ್ನ ಸುಖವನ್ನು ಕಾಣಬೇಕೆಂದು ಇದ್ದೇನೆ. ಗುರುಗಳು ಅದನ್ನು ಕಸಿದುಕೊಳ್ಳಕೂಡದು. ಎಲ್ಲವೂ ನಿಮ್ಮ ಕೈಯಲ್ಲಿ ಇದೆ.

**ಬಿಷಪ್ :** ಅದು ಹೇಗೆ ನನ್ನ ಕೈಯಲ್ಲಿದೆ? ನನಗೆ ಅರ್ಥವಾಗಲಿಲ್ಲ.

**ಲಿಯೊನಾರ್ಡಾ:** ನಿಮ್ಮ ಕೈಯಲ್ಲಿರುವುದು ಹೀಗೆ. ನನ್ನ ದೇಶಾಂತರ ವಾಸ ತನ್ನ ಮದುವೆಗೆ ಕೊಡಬೇಕಾದ ತೆರವು ಎಂದು ತಿಳಿದೊಡನೆ ನನ್ನ ಸೋದರಸೊಸೆ ನಿಮ್ಮ ಸೋದರಅಳಿಯನನ್ನು ಮದುವೆಯಾಗಲು ಒಪ್ಪುವುದಿಲ್ಲ.

**ಬಿಷಪ್ :** ಮಿಸಸ್ ಫಾಲ್ಕ್, ಅದು ನನಗೆ ಬಹಳ ವ್ಯಸನವನ್ನುಂಟು ಮಾಡುವುದು.

**ಲಿಯೊನಾರ್ಡಾ:** ಅವಳಿಗೆ ಯಾವ ಸುಳುವೂ ತಿಳಿಯುವುದಕ್ಕೆ ಮುಂಚೆ ನಾನು ಇಲ್ಲಿಗೆ ಬಂದೆ. ನಿಮ್ಮ ಕಾಗದವನ್ನು ತಂದಿದ್ದೇನೆ. ಅದನ್ನು ಗುರುಗಳು ವಾಪಸ್ಸು ತೆಗೆದುಕೊಳ್ಳಬೇಕು. (ತನ್ನ ಜೇಬಿನಲ್ಲಿ ಕಾಗದವನ್ನು ಹುಡುಕುವಳು.)

**ಬಿಷಪ್ :** (ಹೆಚ್ಚಾಗುತ್ತಿರುವ ಅವಳ ಆತಂಕವನ್ನು ನೋಡಿ) ಏಕೆ, ಏನಾಯಿತು?

**ಲಿಯೊನಾರ್ಡಾ:** ನಿಮ್ಮ ಕಾಗದ—ಹೊರಗೆ ಹೊರಡುವ ಮುನ್ನ ನನ್ನ ಉಡುಪನ್ನು ಬದಲಾಯಿಸುವಾಗ ನನ್ನ ಮೇಜಿನ ಮೇಲೆ ಇಟ್ಟಿದ್ದೆ. ಅದನ್ನು ನನ್ನ ಜೊತೆಯಲ್ಲಿ ತರಬೇಕೆಂದಿದ್ದೆ. ನಾನು ಮರೆತುಬಿಟ್ಟಿರಬೇಕು. ಈಗೇನು ಮಾಡಬೇಕೋ ನಾನು ಹೇಳಲಾರೆ. ಆ ಮೇಜಿನ ಬಳಿ ಆಗಟ್ ಮನೆವಾರ್ತೆ ಲೆಕ್ಕಗಳನ್ನು ಮಾಡುತ್ತಾ ಕುಳಿತಿದ್ದಳು. ನಿಮ್ಮ ಸ್ವಹಸ್ತಾಕ್ಷರಗಳನ್ನು ಗುರುತಿಸಿ ಮನಸ್ಸಿನಲ್ಲಿ ಶಂಕೆಪಡುವಳು. ಏಕೆಂದರೆ ನೀವು ನಮ್ಮ ಮನೆಗೆ ಬರುತ್ತೀರೆಂದು ಕೆಲವು ದಿನಗಳಿಂದ ನಿರೀಕ್ಷಿಸುತ್ತಿದ್ದೇವೆ.

**ಬಿಷಪ್** : ಹಾಗಾದರೆ ಈಗ ಯಾರೂ ಏನೂ ಮಾಡಲಾಗು ವುದಿಲ್ಲ.

**ಲಿಯೊನಾರ್ಡಾ**: ಹಾಗೆನ್ನಬೇಡಿ – ಮಾಡಬೇಕಾದ್ದು ಇದೆ. ಅವಳು ಇಲ್ಲಿಗೆ ಬಂದಾಗ್ಯೆ – ನಿಮ್ಮ ಕಾಗದವನ್ನು ಓದಿದನಂತರ, ಅವಳು ಖಂಡಿತ ವಾಗಿಯೂ ಇಲ್ಲಿಗೆ ಬರುತ್ತಾಳೆ — ಅವಳನ್ನು ಬಾಗಿಲಲ್ಲಿ ಎದುರುಗೊಂಡು ಹೇಳಬಹುದಲ್ಲವೆ ? —

**ಬಿಷಪ್** : ಏನನ್ನು ಹೇಳುವುದು ?

**ಲಿಯೊನಾರ್ಡಾ**: "ನಾನು ತಪ್ಪು ತಿಳಿದುಕೊಂಡಿದ್ದೆ. ನಾವು ಬೆಲೆ ಕಟ್ಟುವಾಗ ಜನಗಳು ಸಾಧಿಸಿರುವ ಕಾರ್ಯಗಳನ್ನು ಎಣಿಸಬೇಕೇ ವಿನಾ ಅವರ ತಪ್ಪುಗಳನ್ನಲ್ಲ. ಅವರು ನಂಬುವ ಅಥವಾ ನಂಬಿರುವ ಸಿದ್ಧಾಂತ ಗಳನ್ನಲ್ಲ, ಅದಕ್ಕೆ ಬದಲಾಗಿ ಲೋಕಹಿತಕ್ಕಾಗಿ ಮತ್ತು ಸತ್ಯಸ್ಥಾಪನೆ ಗೋಸ್ಕರ ಮಾಡುತ್ತಿರುವ ಪ್ರಯತ್ನಗಳನ್ನು. ಇದರ ತತ್ವಾರ್ಥವನ್ನು ನನ್ನ ಶಿಷ್ಯಸಮೂಹಕ್ಕೆ ಪಾಠ ಮಾಡಿಸಲೋಸುಗ ಮುಂದಿನ ಭಾನುವಾರ ನಿನ್ನ ಅತ್ತೆಯ ಭೇಟಿಗೆ ಬರುತ್ತೇನೆ." (ಅಜ್ಜಿಯು ಅರ್ಥಮಾಡಿಕೊಂಡು ತಲೆ ದೂಗುವಳು. ಅದನ್ನು ಕಂಡು ಅಜ್ಜಿಯ ಕೈಹಿಡಿದುಕೊಂಡು ಮುಂದುವರಿಯುವಳು.) ಇಲ್ಲಿ ನೋಡಿ – ಈ ಪೂಜ್ಯಳಾದ ವೃದ್ಧಮಾತೆಯೂ ನನ್ನ ಪರ ವಾದಿಸು ತ್ತಿರುವಳು. ನಮ್ಮ ಕಾಲಕ್ಕಿಂತಲೂ ಹೆಚ್ಚಾದ ತಾಳ್ಮೆ ಈಕೆಯ ಕಾಲ ದಲ್ಲಿತ್ತು – ಏನಾದರೂ ಆಗಲಿ, ಈ ಚಿಕ್ಕ ಊರಲ್ಲಿ ಜನಗಳಿಗಿರುವ ತಾಳ್ಮೆ ಗಿಂತಲೂ ಹೆಚ್ಚಾಗಿ ಈ ಪೂಜ್ಯಳ ದೀರ್ಘಾನುಭವ ಜೀವನದ ತಿರುಳು ಏನೆಂದರೆ – ಒಂದೇ ಮಾತಿನಲ್ಲಿ ಹೇಳಬಹುದಾದರೆ – "ತಾಳ್ಮೆ".

**ಬಿಷಪ್** : ಮಿಸಸ್ ಫಾಲ್ಕ್, ಒಂದು ಸಂದರ್ಭದಲ್ಲಿ ತಾಳ್ಮೆ ನಿಷಿದ್ಧ ವಾಗುತ್ತದೆ. ಅದು ಯಾವಾಗ ಅಂದರೆ – ಕೆಟ್ಟದ್ದು ಮತ್ತು ಒಳ್ಳೆಯದು ಇವುಗಳ ಮಧ್ಯದಲ್ಲಿರುವ ತಾರತಮ್ಯವನ್ನು ತೊಡೆದುಹಾಕುವ ಸಂದರ್ಭದಲ್ಲಿ! ನನ್ನ ಅಜ್ಜಿಯ ಕಾಲದ "ತಾಳ್ಮೆ" ಆ ಜಾತಿಗೆ ಸೇರಿದ್ದು ಆ ಉದಾಹರಣೆ ಅನುಸರಿಸಲು ಅರ್ಹವಾದುದಲ್ಲ,

**ಲಿಯೊನಾರ್ಡಾ** : (ಅಜ್ಜಿಯ ಕೈ ಬಿಡುವಳು.) ಒಂದು ವೇಳೆ ನಾನು ತಪ್ಪಾಗಿ ನಡೆದಿದ್ದರೆ – ನಿಮ್ಮ ದೊಡ್ಡಸ್ತಿಕೆ ದೃಷ್ಟಿಯಿಂದ ನಾನು ಏತಕ್ಕೂ

ಬಾರದವಳಾಗಿದ್ದರೆ - ಒಂದು ವಿಷಯವನ್ನು ಜ್ಞಾಪಿಸಿಕೊಳ್ಳಿ — ಪಾಪಿಗಳ ಕೈಬಿಡದ ಒಬ್ಬ ಪರಮಾತ್ಮನನ್ನು ನೀವು ಸೇವಿಸಿ ಆರಾಧಿಸುತ್ತಿದ್ದೀರೆಂಬು ದನ್ನು ಮರೆಯಬೇಡಿ !

**ಬಿಷಪ್ :** ನಿನ್ನ ಆತ್ಮೋದ್ಧಾರಕೋಸ್ಕರ ನೀನು ನನ್ನಲ್ಲಿಗೆ ಬಂದಾಗ ನಾನು ನಿನ್ನ ಕೈ ಬಿಡುವುದಿಲ್ಲ; ಅಲ್ಲದೆ ನನ್ನ ಕೈಲಾದ ಸಹಾಯ ವನ್ನೆಲ್ಲ ಮಾಡುತ್ತೇನೆ.

**ಲಿಯೊನಾರ್ಡ:** ನನ್ನ ಕಳೆದ ಬಾಳಿನ ಪರಿಹಾರಕ್ಕಾಗಿ ನೀವು ಸಹಾಯ ಮಾಡುತ್ತೀರಾ! ಅದರಿಂದ ನನಗೆ ಎಲ್ಲವೂ ಆದ ಹಾಗೆ. ನಿಮಗೂ ಅದಷ್ಟು ಹೆಚ್ಚಾದ್ದಲ್ಲ. ಆದರೆ ನನ್ನದೊಂದು ಪ್ರಾರ್ಥನೆ ಸಲ್ಲಿಸಿಕೊಡ ಬೇಕು. ಜನರ ಮುಂದೆ ನನ್ನನ್ನು ತಿರಸ್ಕರಿಸದೆ ಸ್ವಲ್ಪ ಮರ್ಯಾದೆ ಪುರಸ್ಕಾರ ಗಳನ್ನು ತೋರಿಸಬೇಕು. ಇಲ್ಲಿಂದ ನನ್ನನ್ನು ಬಿಡಿಸಿ ಅಟ್ಟಬಿಡಬೇಡಿ. ಜನರ ಅಪಹಾಸ್ಯಕ್ಕೆ ನನ್ನನ್ನು ಗುರಿಮಾಡುತ್ತೀರಿ; ಹಾಗೆ ಮಾಡಬೇಡಿ. ನಾನು ಕೂಡ ಕೈಲಾದ ಮಟ್ಟಿಗೂ ನಾವಿಬ್ಬರೂ ಸಾಮಾನ್ಯವಾಗಿ ಎಲ್ಲಿಯೂ ಸಂಧಿಸದಂತೆ ಸರ್ವಪ್ರಯತ್ನ ಪಡುತ್ತೇನೆ. ನಿಮಗೆ ಯಾವ ವಿಧದಿಂದಲೂ ನನ್ನಿಂದ ಸಂಕೋಚವಾಗದಂತೆ ನೋಡಿಕೊಳ್ಳುತ್ತೇನೆ. ನಿಮ್ಮ ಈ ಒಳ್ಳೆಯ ಉಪಕಾರಕ್ಕೆ ಫಲ ನಮ್ಮ ಹುಡುಗರ ಕೃತಜ್ಞತೆ!

**ಬಿಷಪ್ :** ನಿನ್ನ ವಿಷಯದಲ್ಲಿ ನಾನು ಹೀಗೆ ನಡೆದುಕೊಳ್ಳಲು ಬಹಳ ವ್ಯಸನಪಡುತ್ತೇನೆ. ನಾನು ಅತ್ಯಂತ ಕಠಿಣ ಹೃದಯನೆಂದು ನೀನು ಎಣಿಸ ಬಹುದು. ಅದು ನಿಜವಾಗಿಯೂ ಹಾಗಲ್ಲ. ನೀನು ಗಮನಿಸಬೇಕಾದ ವಿಷಯವೊಂದಿದೆ. ಸಾವಿರಾರು ಜನರ ಯುಕ್ತಾಯುಕ್ತ ವಿವೇಚನಾ ಅಂತಃಕರಣಗಳಿಗೆ ನಾನು ರಕ್ಷಕನಾಗಿದ್ದೇನೆ. ಆದ್ದರಿಂದ ನನ್ನ ಸೋದರ ಅಳಿಯನಿಗೋಸ್ಕರ ಏನನ್ನಾದರೂ ಮಾಡಿ ಜನರು ನನ್ನಲ್ಲಿಟ್ಟಿರುವ ನಂಬಿಕೆ ಮತ್ತು ಸ್ಥಾನಮಾನಗಳನ್ನು ಕಳೆದುಕೊಳ್ಳಲಾಗದು. ಗುರುವಿನ ಸ್ಥಾನ ದಲ್ಲಿದ್ದು ಈಗಾಗಲೇ ನಿನ್ನ ಸೋದರಸೊಸೆಗೆ ಸ್ವಾಗತವನ್ನು ಕೊಟ್ಟಿರುವುದೇ ಸಾಕಾಗಿದೆ— ಅದಕ್ಕಿಂತಲೂ ಹೆಚ್ಚಾಗಿ ನನ್ನ ಶಿಷ್ಯವೃಂದವು ಸಂಶಯಾಸ್ಪದ ಗಳಿಂದ ಹೆಂಗಸಿಗೆ ಸ್ವಾಗತವನ್ನು — ಇನ್ನು ಹೆಚ್ಚು ಹೇಳಿ ನಿನ್ನ ಮನಸ್ಸನ್ನು ನೋಯಿಸಲಾರೆ.

**ಲಿಯೊನಾರ್ಡ್ಡ:** ಹಾಗೆಯೆ?

**ಬಿಷಪ್:** ನನ್ನ ಮಾತನ್ನು ನಂಬು, ನಿಜವಾಗಿಯೂ ನನ್ನ ಮನಸ್ಸಿನಲ್ಲಿ ವ್ಯಸನವಾಗುತ್ತೆ. ನನ್ನ ಮಟ್ಟಿಗೆ ನಾನು ಹೇಳಬಹುದಾದರೆ—ನೀನು ಹೇಳುವುದೆಲ್ಲ ವಾಸ್ತವವಾಗಿ ನನ್ನ ಮನಸ್ಸಿಗೆ ಅಂಟಿದೆ.

(ಇಷ್ಟರಲ್ಲಿ ಅಜ್ಜಿ ಹೊರಗೆ ಹೋಗಲು ಏಳುವಳು.)

**ಲಿಯೊನಾರ್ಡ್ಡ:** ಹೊರಟುಹೋಗುತ್ತೀರಾ?

(ಬಿಷಪ್ ಗೋಡೆಯಲ್ಲಿರುವ ಒಂದು ಗುಂಡಿಯನ್ನು ಅಮುಕುವನು.)

**ಅಜ್ಜಿ:** ನಾನು ಹೋಗುತ್ತೇನೆ. ಈ ದೃಶ್ಯಗಳನ್ನು ನೋಡಲು ನನಗೆ ವಯಸ್ಸು ಮೀರಿದ ಮುಪ್ಪು. ಈಗ ಇಲ್ಲಿ ನಡೆದದ್ದನ್ನೆಲ್ಲಾ ಕಣ್ಣಾರ ನೋಡಿ ಕಿವಿಯಾರ ಕೇಳಿದ ಮೇಲೆ ಇನ್ನು ಇಲ್ಲಿರಲು ಹಕ್ಕಿಲ್ಲ.

(ಕಾರ್ನೀಲಿಯಾ ಒಳಗಿನಿಂದ ಬಂದು ಅಜ್ಜಿಯನ್ನು ಕರೆದುಕೊಂಡು ಹೋಗುವಳು.)

**ಲಿಯೊನಾರ್ಡ್ಡ:** (ಮುಂದಕ್ಕೆ ಬಂದು) ಈಗ ನಾನು ಗುರುಗಳಿಗೆ ಇದನ್ನು ಹೇಳುತ್ತೇನೆ;—ನಿಮಗೆ ಧೈರ್ಯವಿಲ್ಲ. ನನ್ನ ಎದುರುಬದುರಾಗಿ ಈಗ ನಿಂತುಕೊಂಡು, ನೀವು ಏನು ಮಾಡಬೇಕೋ ನಿಮಗೆ ಅಂತರಂಗದಲ್ಲಿ ತಿಳಿದಿದೆ — ಆದರೆ ಮಾಡಲು ಎದೆ ಇಲ್ಲ.

**ಬಿಷಪ್:** ನೀನು ಕೇವಲ ಹೆಣ್ಣುಹೆಂಗಸು. ಆದ್ದರಿಂದ ನಿನಗೆ ಪ್ರತ್ಯುತ್ತರ ಕೊಡುವುದಿಲ್ಲ!

**ಲಿಯೊನಾರ್ಡ್ಡ:** ನಾನು ಹೆಂಗಸಾದ್ದರಿಂದಲೇ ಈ ದಿನ ನನ್ನೊಡನೆ ನೀವು ಹಾಗೆ ಮಾತುಗಳನ್ನು ಆಡಿದಿರಿ. ಅದೇ ಮಾತುಗಳನ್ನು ನೀವು ಒಬ್ಬ ಗಂಡಸಿನೊಡನೆ - ಉದಾಹರಣೆಗೆ ಜನರಲ್ ರೋಸೆನ್ ಒಡನೆ - ನೀವು ಆಡುತ್ತಿರಲಿಲ್ಲ. ಆತನ ಪೂರ್ವದ ನಡತೆ - ಈ ದಿನದ ನಡತೆಗಳು—ಚೆನ್ನಾಗಿ ಗೊತ್ತಿದ್ದರೂ ನಿಮ್ಮ ಮನೆಗೆ ಆತನು ಬಂದುಹೋಗಲು ಅವಕಾಶವಿದೆ!

**ಬಿಷಪ್:** ಇನ್ನು ಮೇಲೆ ನಮ್ಮ ಮನೆಗೆ ಆತನು ಬರದಂತೆ ಮಾಡುತ್ತೇನೆ. ಅದಲ್ಲದೆ ನಾನು ಹೇಳುವುದೇನೆಂದರೆ ನಿಮ್ಮಿಬ್ಬರ ಪ್ರಸಂಗಗಳಲ್ಲಿ ವ್ಯತ್ಯಾಸವಿದೆ ಎಂದು ನೀನು ಒಪ್ಪಬೇಕು.

**ಲಿಯೊನಾರ್ಡಾ:** ಖಂಡಿತವಾಗಿಯೂ ವ್ಯತ್ಯಾಸವಿದೆಯೆಂದು ಒಪ್ಪಿದರೂ, ಅದರೊಳಗಿನ ಭೇದಭಾವವನ್ನು ನೀವು ಈ ರೀತಿ ತೋರಿಸುತ್ತೀರೆಂದು ನಾನು ಎಣಿಸಿರಲಿಲ್ಲ. ಮತ್ತೊಂದೇನೆಂದರೆ ನೀವು ಅನುಸರಿಸಬೇಕಾದ ಧರ್ಮಮಾರ್ಗ–ಅನ್ಯಾಯವಾಗಿ ಆಕ್ಷೇಪಣೆಗೆ ಒಳಗಾದ ನಿರಪರಾಧಿಯನ್ನು ರಕ್ಷಿಸುವುದಕ್ಕೆ ಬದಲು ಪ್ರತ್ಯಕ್ಷವಾಗಿ ಪಾಪಾಚರಣೆಯಲ್ಲಿ ಉದ್ಯುಕ್ತನಾಗಿರುವವನಿಗೆ ಆಸರೆ ಮತ್ತು ಬೆಂಬಲ ನೀಡುವುದು ನಿಮ್ಮ ಕರ್ತವ್ಯವೆಂದು ನಾನೆಂದೂ ತಿಳಿದಿರಲಿಲ್ಲ.

**ಬಿಷಪ್ :** ಈ ತರ್ಕವಾದವನ್ನು ಮುಂದುವರಿಸುವುದರಿಂದೇನಾದರೂ ಉಪಯೋಗವುಂಟೆ ?

(ಹಿಂದುಗಡೆಯಿಂದ ಬಾಗಿಲು ತೆರೆದು, ಹೊಸಲಿನಿಂದ ಆಗಟ್ ಕೂಗುವಳು.)

**ಆಗಟ್ :** ಅತ್ತೇ !

**ಲಿಯೊನಾರ್ಡಾ:** ಆಗಟ್ ! ಬಂದಳು ! ದೇವರೇ ಗತಿ !

**ಆಗಟ್ :** (ಮುಂದೆ ಬಂದು) ಅತ್ತೇ !

**ಲಿಯೊನಾರ್ಡಾ :** ಗೊತ್ತಾಗಿದೆ ಹಾಗಾದರೆ ನಿನಗೆ ! (ಆಗಟ್ ಅವಳ ತೋಳುಗಳಲ್ಲಿ ಸೇರಿಕೊಳ್ಳುವಳು.) ನನ್ನ ಕಂದ !

**ಆಗಟ್ :** ನೀನು ಇಲ್ಲಿರಬೇಕೆಂದು ನನ್ನ ಮನಸ್ಸಿಗೆ ತೋಚಿತು. ದೇವರ ದಯೆ !

**ಲಿಯೊನಾರ್ಡಾ:** ಸ್ಥೈರಿಸಿ ತಡೆದುಕೋ, ಮಗು.

**ಆಗಟ್ :** ಇಲ್ಲ, ಇನ್ನು ನನ್ನ ಕೈಲಾಗುವುದಿಲ್ಲ. ಇದು ಅತಿಯಾಯಿತು.

**ಬಿಷಪ್ :** ಹೆಂಗಸರು ನೀವಿಬ್ಬರೇ ಇರಬೇಕೆಂದಿದ್ದರೆ—?

**ಆಗಟ್ :** ಎಲ್ಲಿ, ಹಾಗ್‌ಬಾರ್ಟ್ –ಎಲ್ಲಿ ?

**ಬಿಷಪ್ :** ಸ್ವಲ್ಪ ಸುತ್ತಾಡಿಕೊಂಡು ಬರಲು ಹೊರಗೆ ಹೋಗಿದ್ದಾನೆ.

**ಆಗಟ್ :** ಕೋಪದಿಂದ ಕುದ್ದುಹೋಗುವ ಹಾಗೆ ಆಗುತ್ತಿದೆ ನನಗೆ–ನಿಮ್ಮ ಮನೆಯಲ್ಲಿ ನನ್ನ ಸ್ವಾಗತ ಪುರಸ್ಕಾರಗಳಿಗೆ ಕೊಡಬೇಕಾದ ಬೆಲೆ

ಇದೇಯೊ? ನನಗೆ ತಾಯಿಯಾಗಿ ಇರುವವಳನ್ನು ನಾನು ಮಾರಬೇಕು ;— ಪ್ರಪಂಚದಲ್ಲಿರುವ ಎಲ್ಲದಕ್ಕಿಂತ ಹೆಚ್ಚಾಗಿ ನಾನು ಪ್ರೀತಿಸುವ ಈ ಪೂಜ್ಯಳನ್ನು ಮಾರಬೇಕು ಅಲ್ಲವೆ?

**ಬಿಷಪ್** : ಮಿಸಸ್ ಫಾಲ್ಕ್, ನೀನು ಮಾತುಗಳನ್ನು ಮುಂದುವರಿಸಬೇಕೆಂದಿರುವೆಯೊ, ಅಥವಾ —?

**ಆಗಟ್**: ಯಾವ ಮಾತನ್ನು ಮುಂದುವರಿಸುವುದು? ಪ್ರಿಯಳಾದ ನನ್ನ ಅತ್ತೆಯ ವಿಕ್ರಯ ಸಂಬಂಧದ ಕರಾರುಗಳನ್ನು ಗೊತ್ತುಮಾಡುವುದಕ್ಕೊ? ಇಲ್ಲ—ನನ್ನ ಅತ್ತೆಯನ್ನು ಬಿಟ್ಟು ನನ್ನನ್ನು ಸ್ವರ್ಗಕ್ಕೆ ಹೋಗು ಎಂದರೆ ನನಗೆ ಸ್ವರ್ಗವೇ ಬೇಡವೆಂದು ತಿರಸ್ಕರಿಸುವೆನು.

**ಲಿಯೊನಾರ್ಡಾ**: ಮಗು – ಮಗು!

**ಆಗಟ್** : ನಾನು ಮಾತಾಡುವುದಕ್ಕೆ ಬಿಡು, ಅತ್ತೆ. ನನ್ನ ಹೃದಯದಲ್ಲಿ ಅಡಗಿರುವುದನ್ನು ನಾನು ಹೇಳಲೇಬೇಕು—ತಡೆಯಲಾಗದು. ಏನಾದರೂ ಆಗಲಿ, ಒಂದು ಅಲ್ಲಿ ಅಡಗಿದೆ – ನನ್ನ ಪ್ರಾಣ ಇರುವ ತನಕ ನಾನು ಪ್ರೀತಿಸುವವರನ್ನು ನಾನು ಬಿಟ್ಟುಕೊಡುವುದಿಲ್ಲ.

**ಬಿಷಪ್** : ನೀನು ಚಿಕ್ಕ ವಯಸ್ಸಿನವಳು—ಆದ್ದರಿಂದ ಯೌವ್ವನಸ್ಥರಂತೆ ಉತ್ಪ್ರೇಕ್ಷೆಯಿಂದ ಮಾತಾಡುತ್ತಿದ್ದೀಯೆ! ಇನ್ನು ನಮ್ಮ ವಾದವಿವಾದಗಳನ್ನು ಇಲ್ಲಿಗೆ ನಿಲ್ಲಿಸೋಣ. ಈ ಮಾತುಗಳಿಂದ ಏನೂ ಪ್ರಯೋಜನ ಕಾಣುವುದಿಲ್ಲ.

(ಹಾಗ್‌ಬಾರ್ಸ್ಟ್ ಬಾಗಿಲ ಬಳಿ ಬರುವನು.)

**ಆಗಟ್** : (ಇತರರಿಗಿಂತಲೂ ಮುಂಚಿತವಾಗಿ ಅವನನ್ನು ಕಂಡು,) ಹಾಗ್‌ಬಾರ್ಸ್ಟ್—

**ಹಾಗ್‌ಬಾರ್ಸ್ಟ್**: ಮಿಸಸ್ ಫಾಲ್ಕ್, ಹೊರಗಡೆಗೆ ನಿಮ್ಮ ಧ್ವನಿ ಕೇಳಿಸಿತು—

**ಆಗಟ್** : ಹಾಗ್‌ಬಾರ್ಸ್ಟ್—(ಅವನ ಮುಂದೆ ಹೋಗುವಳು; ಅವನು ಪಕ್ಕಕ್ಕೆ ಸರಿದದ್ದನ್ನು ನೋಡಿ ಚಕಿತಳಾಗಿ,) ಮುಟ್ಟಬೇಡ, ನನ್ನ ಈಗ.

**ಹಾಗ್‌ಬಾರ್ಸ್ಟ್**: ಇದೇನಿದು, ಆಗಟ್?

**ಆಗಟ್ :** ಇದನ್ನು ತಪ್ಪಿಸಲು ನೀನು ಏಕೆ ಪ್ರಯತ್ನಪಡಲಿಲ್ಲ? ನನಗೆ ಇದರ ವಿಷಯ ಒಂದು ಮಾತೂ ಹೇಳಲಿಲ್ಲ ?

**ಹಾಗ್ ಬಾರ್ಸ್ಟ್ :** ಅದಕ್ಕೆ ಕಾರಣ, ನನಗೇ ಏನೂ ತಿಳಿದಿರಲಿಲ್ಲ !

**ಆಗಟ್ :** ಇಂಥಾ ವಿಷಯಗಳನ್ನು ಬಾಯಿಬಿಟ್ಟು ಹೇಳಬೇಕಾಗಿಲ್ಲ. ಅದರ ಸುಳುವು ತಾನಾಗಿಯೇ ಮನಸ್ಸಿಗೆ ಹೊಳೆಯುತ್ತದೆ. ಅದು ನಿನ್ನ ಮನಸ್ಸಿಗೆ ಅಷ್ಟು ಹತ್ತಿಲ್ಲವೆಂದು ತೋರುತ್ತೆ. ಈಗ ಸ್ವಲ್ಪ ಮುಂಚೆ ಅದು ನಿನಗೆ ತಿಳಿಯಲಿಲ್ಲವೆ ?

**ಹಾಗ್ ಬಾರ್ಸ್ಟ್ :** ತಿಳಿಯಿತು. ಆದರೆ—

**ಆಗಟ್ :** ತಿಳಿದೊಡನೆ ಅದನ್ನು ನಮಗೆ ಹೇಳಲು ನೀನು ಓಡಿ, ಹಾರಿಬರಲಿಲ್ಲ !

**ಹಾಗ್ ಬಾರ್ಸ್ಟ್ :** ಅದು ನಿಜ,—ನಾನು,—

**ಆಗಟ್ :** ನಿನ್ನ ಮನಸ್ಸೆಲ್ಲಾ ಬೇರೆ ಎಲ್ಲೋ ಹೋಗಿತ್ತು. ನಾನಾದರೂ ಅವಳಿಗೆ ಪ್ರಪಂಚದಲ್ಲಿ ಎಲ್ಲವನ್ನೂ ಸರಿಪಡಿಸಿಕೊಡಬೇಕೆಂಬುದನ್ನು ನನ್ನ ಜೀವನದ ಗುರಿಯಾಗಿಟ್ಟುಕೊಂಡಿದ್ದೇನೆ. ನೀನು ಅದನ್ನು ಮಾಡುತ್ತೀಯೆಂದು ನಾನು ನಂಬಿದ್ದೆ.

**ಹಾಗ್ ಬಾರ್ಸ್ಟ್ :** ಹಾಗೆ ಹೇಳುವುದು ನನಗೆ ಅನ್ಯಾಯ ಮಾಡಿದ ಹಾಗೆ ನಾನೇನು ಮಾಡಬಲ್ಲೆ ?

**ಆಗಟ್ :** ಇಲ್ಲ. ನೀನು ಕನಸಿನಲ್ಲಿರುವವರ ಹಾಗೆ ಇದ್ದೀಯೆ. ಆದರೆ ಒಂದು ವಿಷಯವನ್ನು ಖಚಿತ ಮಾಡಿಕೊ. ನಿನ್ನ ಮನೆಯಲ್ಲಿ ನನಗೊಂದು ಗೌರವದ ಸ್ಥಾನವನ್ನು ಕೊಳ್ಳುವುದಕ್ಕೋಸ್ಕರ ನನ್ನ ಅತ್ತೆಯನ್ನು ಜನರ ಕಡೆಗಣ್ಣು ಮತ್ತು ಇತರ ಅವಮಾನಗಳಿಗೆ ಗುರಿಪಡಿಸುವುದಿಲ್ಲ; ಆ ಬೆಲೆಯನ್ನು ನಾನೆಂದಿಗೂ ಕೊಡಲಾರೆ.

**ಹಾಗ್ ಬಾರ್ಸ್ಟ್ :** ಅದು ಸರಿ ತಾನೆ. ಆ ಪ್ರಶ್ನೆಯೇ ಈಗಿಲ್ಲವಲ್ಲ ! ನಾನು ನಿಮ್ಮಿಬ್ಬರೊಡನೆ ವಾಸಿಸಲು ಬರುತ್ತೇನೆ. ಮತ್ತು—

**ಆಗಟ್ :** ನೀನು ಶುದ್ಧ ಮಂಕುದಿಣ್ಣೆಯಂತೆ ಏನೇನೋ ಹರಟುತ್ತಿದ್ದೀಯೆ.

**ಲಿಯೊನಾರ್ಡ :** ಆಗಟ್—ಆಗಟ್—!

**ಆಗಟ್ :** ನಾನುವೋಸಹೋಗಿದ್ದೇನೆ; ಮನಸ್ಸಿನಲ್ಲಿ ನೊಂದಿದ್ದೇನೆ; ಮತ್ತು ನನ್ನ ಸೊಕ್ಕೆಲ್ಲಾ ಅಡಗಿ ಕುಗ್ಗಿಹೋಗಿದೆ. ಇಷ್ಟಾದ ಮೇಲೆ ನನ್ನ ಮನಸ್ಸಿನಲ್ಲಿರುವುದನ್ನು ಹೇಳಿಯೇಬಿಡಬೇಕು. ಹೀಗಾಗುತ್ತಿರುವುದು ಇನತ್ತೇ ಅಲ್ಲ; ಇದೇ ಮೊದಲಾವರ್ತಿಯೂ ಅಲ್ಲ. ಹೇಳಿಬಿಡುತ್ತೇನೆ.

**ಲಿಯೊನಾರ್ಡಾ:** ಬೇಡ. ನಿನ್ನ ಮನಸ್ಸನ್ನು ನಾನು ಅರ್ಥಮಾಡಿಕೊಳ್ಳಬಲ್ಲೆ — ಅದೇನದು ? ಹೀಗೆ ಮಾತಾಡಿ ಅವನು ನಿನ್ನಲ್ಲಿಟ್ಟಿರುವ ಪ್ರೀತಿಗೆ ಕುಂದುತಗುವೆ ನೀನು.

**ಆಗಟ್ :** ಏನು ? ಅವನು ನನ್ನಲ್ಲಿಟ್ಟಿರುವ ಪ್ರೀತಿಯೆ !

**ಲಿಯೊನಾರ್ಡಾ:** ನಿನಗೆ ಬುದ್ಧಿ ಗಿದ್ಧಿ ಸರಿಯಾಗಿದೆಯೋ ಇಲ್ಲವೊ ? ಏನು ಹುಚ್ಚಾಪಟ್ಟೆ ಆಡುತ್ತಿದೀಯೆ !

**ಆಗಟ್ :** ಇಲ್ಲ. ನಾನು ಹೇಳುತ್ತಿರುವುದು ನಿಜವಾದ ಮಾತು !

**ಲಿಯೊನಾರ್ಡಾ:** (ಮನಸ್ಸಿಟ್ಟು ಮೆತ್ತಗೆ ಮಾತಾಡುತ್ತಾ) ಬರಿಯ ಕೋಪದಲ್ಲಿ ಆಡಿದ ಮಾತುಗಳು, ಆಗಟ್. ನೀವಿಬ್ಬರೇ ಏಕಾಂತದಲ್ಲಿ ಪವಿತ್ರವಾದ ಶಾಂತಿಯುಕ್ತವಾದ ಸಮಯಗಳಲ್ಲಿ ಇದ್ದಾಗ ಅವನ ಹೃದಯಾಂತರಾಳದಲ್ಲಿ ನಿನ್ನ ಮೇಲಿನ ಪ್ರೀತಿಯು ಎಷ್ಟು ನಿಜ ಮತ್ತು ಸ್ಥಿರವಾದದ್ದು ಎಂಬುದನ್ನು ನೀನು ಅರಿತಿರುವೆ. ಆಗಟ್, ಅವನು ಇತರ ಮನುಷ್ಯರಂತಲ್ಲ !

**ಆಗಟ್ :** (ಅವಳಿಂದ ದೂರ ಸರಿದು) ಸಾಕು – ಸಾಕು ನಿಲ್ಲಿಸು. ನಿನಗೇನೂ ಕಾಣುವುದಿಲ್ಲ !

**ಲಿಯೊನಾರ್ಡಾ:** ನಿನಗೆ ಬುದ್ಧಿಭ್ರಮಣೆಯಾಗಿರಬೇಕು. ಬಹಳ ಹೀನಾಯವಾಗಿ ನಡೆದುಕೊಳ್ಳುತ್ತಿದ್ದೀಯೆ.

**ಆಗಟ್ :** ಹೀನಾಯವಾಗಿ ನಡೆದುಕೊಳ್ಳುತ್ತಿರುವುದು ಅವನು, ನಾನಲ್ಲ. ಏಕೆಂದರೆ ಅವನು ಪ್ರೀತಿಸುತ್ತಿರುವುದು ನನ್ನನ್ನಲ್ಲ ! (ಅಳುವುದಕ್ಕಾರಂಭಿಸಿ ಚಿಕ್ಕಮನೆಯ ಹಿಂಭಾಗಕ್ಕೆ ಹೋಗುವಳು.)

**ಬಿಷಪ್ :** (ಹಾಗ್‌ಬಾರ್ಟ್ ಕುರಿತು ಮೆಲ್ಲನೆ ದನಿಯಲ್ಲಿ) ಇದಾದ ಮೇಲೆ ನೀನು ಕೆಲಕಾಲ ಎಲ್ಲಾದರೂ ಹೋಗಿಬರುವೆಯೆಂದು ತಿಳಿಯಲೆ ?

**ಹಾಗ್‌ಬಾರ್ಟ್ :** ಹಾಗೆಯೇ ಆಗಲಿ.

ಬಿಷಪ್ : ಹೋಗೋಣ ಬಾ ಹಾಗಾದರೆ – (ಬಿಷಪ್ ಎಡಗಡೆಯಿಂದ ಹೊರಗೆ ಹೋಗುವನು. ಹಾಗ್‌ಬಾರ್ಟ್ ಅವನನ್ನು ಹಿಂಬಾಲಿಸುವನು.)

ಆಗಟ್ : (ಹಿಂದಿನಿಂದ ಲಿಯೊನಾರ್ಡಾ ಸಮೀಪಕ್ಕೆ ಬಂದು) ನನ್ನನ್ನು ಕ್ಷಮಿಸುವೆಯಾ ?

ಲಿಯೊನಾರ್ಡಾ : ಮನೆಗೆ ಹೋಗೋಣ.

ಆಗಟ್: ನನಗೆ ಏನಾದರೂ ಒಂದು ಒಳ್ಳೆಯ ಮಾತು ಹೇಳು.

ಲಿಯೊನಾರ್ಡಾ: ಇಲ್ಲ.

ಆಗಟ್: ಹೇಳುವ ತನಕ ನಿನ್ನನ್ನು ನಾನು ಬಿಡುವುದಿಲ್ಲ.

ಲಿಯೊನಾರ್ಡಾ: ನನ್ನ ಕೈಯಲ್ಲಿ ಆಗುವುದಿಲ್ಲ.

ಆಗಟ್ : ನಿನ್ನ ಮೇಲೆ ನನಗೆ ಮತ್ಸರವಿಲ್ಲ, ಅತ್ತೆ.

ಲಿಯೊನಾರ್ಡಾ: ಸುಮ್ಮನಿರು.

ಆಗಟ್ : ಏನಾದರೂ ಆಗಲಿ, ನಾನು ಎಲ್ಲಾದರೂ ಹೋಗಿ ಕೆಲವು ದಿನಗಳು ಇರುವುದಕ್ಕೆ ನೀನು ಒಪ್ಪಬೇಕು. ನನ್ನ ಮನಸ್ಸಿನಲ್ಲಿರುವುದನ್ನೆಲ್ಲಾ ವಿಂಗಡಿಸಿ ಪರ್ಯಾಲೋಚಿಸಿ ಒಂದು ಸಮಾಧಾನ ಸ್ಥಿತಿಗೆ ಬರಬೇಕು. (ಕಣ್ಣೀರು ಹಾಕುವಳು.) ಅತ್ತೆ, ನಿನ್ನ ದಮ್ಮಯ್ಯ ಹೇಳು, ನೀನು ಅವನನ್ನು ಪ್ರೀತಿಸುತ್ತೀಯಾ ? (ಲಿಯೊನಾರ್ಡಾ ಅವಳ ಬಳಿ ಬಿಟ್ಟು ಹೋಗಲು ಯತ್ನಿಸುವಳು.) ಅವನಲ್ಲಿ ನನ್ನ ಪ್ರೀತಿ ಇನ್ನು ಮೇಲೆ ಏನೂ ಇಲ್ಲ. ನೀನು ಅವನನ್ನು ಪ್ರೀತಿಸುತ್ತಿದ್ದರೆ ಅವನನ್ನು ನಾನು ಬಿಟ್ಟುಕೊಡುವೆನು.

ಲಿಯೊನಾರ್ಡಾ: ಕಂಡವರ ಮನೆಯಲ್ಲಾದರೂ ಆ ವಿಷಯದಲ್ಲಿ ನಿನ್ನ ನಾಲಿಗೆ ಬಿಗಿಹಿಡಿ. ನೀನು ನನ್ನ ಜೊತೆಯಲ್ಲಿ ಬರದಿದ್ದರೆ ನಾನೇ ಹೋಗುತ್ತೇನೆ.

ಆಗಟ್: ಹಾಗಾದರೆ ನಾನು ಇನ್ನೆಂದಿಗೂ ನಿನ್ನ ಹಿಂದೆ ಬರುವುದೇ ಇಲ್ಲ.

ಲಿಯೊನಾರ್ಡಾ : ನಿನಗೆ ಸಂಪೂರ್ಣವಾಗಿಯೂ ಬುದ್ಧಿ ಭ್ರಮಣೆಯಾಗಿದೆ.

ಆಗಟ್ : ಹೌದು, ಆಗಿದೆ. ಅತ್ತೆ, ನೀನು ಕರುಣೆಯಿಂದ ನನ್ನನ್ನು ನೋಡಿ ಒಂದೆರಡು ಮೃದುವಾದ ಮಾತುಗಳನ್ನಾದರೂ ಆಡದೆ

ಹೋದರೆ ನಾನಿನ್ನು ಜೀವಿಸಲಾರೆ – ಅತ್ತೆ, ಸದಾ ದೇವರು ನಿನಗೆ ಕಾವಲಾಗಿರಲಿ!

**ಲಿಯೊನಾರ್ಡಾ** : (ಅವಳ ಕಡೆ ತಿರುಗಿ) ನನ್ನ ಮಗು, ಬಾಮ್ಮ!

**ಆಗಟ್** : ಆ, ಆ – (ಅವಳ ತೋಳುಗಳ ನಡುವೆ ಸೇರುವಳು.

**ಲಿಯೊನಾರ್ಡಾ**: ಮನೆಗೆ ಹೋಗೋಣ.

**ಆಗಟ್** : ಹಾಗೇ ಆಗಲಿ.

(ತೆರೆ ಬೀಳುವುದು.)

# ಮೂರನೆಯ ಅಂಕ

[ದೃಶ್ಯ—ಲಿಯೊನಾರ್ಡಾ ಫಾಲ್ಕ್ ಮನೆಯ ತೋಟ. ಕೆಲವು ದಿನಗಳು ಕಳೆದ ನಂತರ. ಎಡಭಾಗದಲ್ಲಿ ಬೇಸಿಗೆಕಾಲದಲ್ಲಿ ಉಪಯೋಗಿಸುವ ಒಂದು ಆರಾಮ ಮಂದಿರ. ಅದರ ಮುಂದೆ ಒಂದು ಮೇಜು ಮತ್ತು ಕುರ್ಚಿ. ಮೇಜಿನ ಮೇಲೆ ಒಂದು ದೊಡ್ಡ ಪುಟ್ಟಿ. ಅರ್ಧವಷ್ಟು ಸೇಬಿನ ಹಣ್ಣುಗಳಿಂದ ತುಂಬಿದೆ. ಪೆಡೆರ್‌ಸನ್‌ನೊಡನೆ ಮಾತನಾಡುತ್ತಾ ಲಿಯೊನಾರ್ಡಾ ನಿಂತಿರುವಳು.]

**ಲಿಯೊನಾರ್ಡಾ:** ಸರಿ ಹಾಗಾದರೆ, ಪೆಡರ್‌ಸನ್. ಕುದುರೆಗಳಿಗೆ ಇಲ್ಲಿ ಏನೂ ಕೆಲಸವಿಲ್ಲದಿದ್ದರೆ ಮಿಸ್ ಆಗಟ್‌ಅನ್ನು ಮನೆಗೆ ಕರೆತರಲು ಅವುಗಳನ್ನು ಕಳುಹಿಸಿಕೊಡಬಹುದು. ಇವತ್ತೆ ಕಳುಹಿಸಲಾಗುವುದೆ?

**ಪೆಡೆರ್‌ಸನ್:** ಆಗಬಹುದು. ಏನೂ ತೊಂದರೆಯಿಲ್ಲ.

**ಲಿಯೊನಾರ್ಡಾ:** ಹಾಗಾದರೆ ಕೈಲಾದಷ್ಟು ಜಾಗ್ರತೆಯಾಗಿ ನಮ್ಮ ಬೆಟ್ಟದ ಮೇಲಿನ ತೋಟಕ್ಕೆ ಅವಳು ವಾಪಸ್ಸು ಬರುವುದಕ್ಕೋಸ್ಕರ ಒಂದು ಜೋಡಿ ಕುದುರೆಗಳನ್ನು ಹ್ಯಾನ್ಸ್ ಜೊತೆಗೆ ಕಳುಹಿಸು. ಇಷ್ಟು ದಿನಕ್ಕೆ ಅಲ್ಲಿ ಚಳಿ ಅವಳಿಗೆ ತಡೆಯಲಾರದಷ್ಟು ಹೆಚ್ಚಿರಬೇಕು.

**ಪೆಡೆರ್‌ಸನ್:** ಹಾಗೆಯೇ ಮಾಡುತ್ತೇನೆ. (ಹೊರಡಲಿರುವನು.)

**ಲಿಯೊನಾರ್ಡಾ:** ಪೆಡೆರ್‌ಸನ್ – ಏನೋ ಜ್ಞಾಪಕಕ್ಕೆ ಬಂತು. ನಿನ್ನದು ಆ ಹಳೆಯ ವಿಷಯ – ಏನು, ಯಾವ ಸ್ಥಿತಿಯಲ್ಲಿದೆ?

**ಪೆಡೆರ್‌ಸನ್:** ಓ, ಆ ವಿಷಯ —

**ಲಿಯೊನಾರ್ಡಾ:** ಈ ಸಾಯಂಕಾಲ ಬಾ. ನೋಡೋಣ, ಆ ವಿಷಯವನ್ನು ಏನಾದರೂ ಸ್ವಲ್ಪ ಮಾತಾಡಿ ಮುಂದುವರಿಸಲಾಗುತ್ತದೆಯೆ, ಎಂದು ನೋಡೋಣ.

**ಪೆಡೆರ್‌ಸನ್:** ಅಮ್ಮ–ಆ ವಿಷಯ ಮಾತಾಡಲು ಅವಕಾಶ ಸಿಕ್ಕುತ್ತದೆಯೇ ಎಂದು ನಾನೂ ಬಹಳ ದಿನಗಳಿಂದ ಕಾದಿದ್ದೇನೆ.

**ಲಿಯೊನಾರ್ಡಾ:** ಹೌದು — ಆದರೆ ನನಗೆ ಎಂಟು ಹತ್ತು ದಿನಗಳಿಂದಲೂ ಯಾವ ವಿಷಯವನ್ನೂ ಸ್ಥಿಮಿತವಾಗಿ ಯೋಚಿಸುವುದಕ್ಕೆ ಆಗುತ್ತಿಲ್ಲ!

**ಪೆಡೆರ್‌ಸನ್:** ನನಗೂ ಅದು ತೋರಿತು, ಅಮ್ಮ. ನಿಮ್ಮ ಸ್ಥಿತಿ ಏನೋ ಹೆಚ್ಚು ಕಡಮೆಯಾಗಿರುವ ಹಾಗೆ ಇದೆ.

**ಲಿಯೊನಾರ್ಡಾ:** ಎಲ್ಲರಿಗೂ ಏನಾದರೂ ಒಂದು ತೊಂದರೆ ಇದ್ದೇ ಇರುತ್ತೆ. (ಪೆಡೆರ್‌ಸನ್ ಸ್ವಲ್ಪ ಕಾಯುವನು. ಲಿಯೊನಾರ್ಡಾ ಸಣ್ಣ ಸೇಬಿನ ಗಿಡದಿಂದ ಹಣ್ಣುಗಳನ್ನು ಹುಷಾರಾಗಿ ಕೊಯ್ದು ತನ್ನ ಕೈಯಲ್ಲಿರುವ ಪುಟ್ಟಿಯಲ್ಲಿ ಸಂಗ್ರಹಿಸುತ್ತಿರುವುದನ್ನು ನೋಡಿ, ಇನ್ನು ಕಾದು ಉಪಯೋಗವಿಲ್ಲವೆಂದು ಪೆಡೆರ್‌ಸನ್ ಎಡಗಡೆಯಿಂದ ಹೊರಗೆ ಹೋಗುವನು. ಬಲಗಡೆಯಿಂದ ಹಾಗ್‌ಬಾರ್ಟ್ ಪ್ರವೇಶಿಸುವನು. ಅವನು ಬಂದದ್ದು ಲಿಯೊನಾರ್ಡಾಗೆ ತಿಳಿಯುವುದಿಲ್ಲ. ಕೆಲವು ಕ್ಷಣಗಳಾದ ಮೇಲೆ —)

**ಹಾಗ್‌ಬಾರ್ಟ್:** ಮಿಸಸ್ ಫಾಲ್ಕ್! (ಲಿಯೊನಾರ್ಡಾ ಹೆದರಿಕೊಂಡು ಕಿರುಚುವಳು.) ಕ್ಷಮಿಸಬೇಕು. ನಾನೇನು ಮಾಡಲಿ? ಎಲ್ಲೆಲ್ಲೂ ನಿನ್ನನ್ನು ಹುಡುಕುತ್ತಿದ್ದೆ. ನೀನು ಸ್ವಸ್ಥವಾಗಿದ್ದೀಯಾ? ನಾನು ಈಗತಾನೆ ಊರಿಗೆ ವಾಪಸ್ಸು ಬಂದೆ.

**ಲಿಯೊನಾರ್ಡಾ:** ಆಗಟ್ ಮನೆಯಲ್ಲಿ ಇಲ್ಲ.

**ಹಾಗ್‌ಬಾರ್ಟ್:** ನನಗೆ ತಿಳಿದಿದೆ. ಆದರೆ ಇಷ್ಟು ದಿನಗಳಿಂದಲೂ ಅವಳು ಇಲ್ಲಿಲ್ಲವೆ?

**ಲಿಯೊನಾರ್ಡಾ:** ಹೌದು. ಇಲ್ಲ.

**ಹಾಗ್‌ಬಾರ್ಟ್:** ಇನ್ನೂ ಕಾನೆ ದಿನ ಅವಳು ಹೊರಗೇ ಇರುತ್ತಾಳೆಯೆ!

**ಲಿಯೊನಾರ್ಡಾ:** ಇವತ್ತು ಕುದುರೆಗಳನ್ನು ಕಳುಹಿಸುತ್ತೇನೆ. ನಾಡಿದ್ದಿನ ಹೊತ್ತಿಗಾದರೂ ವಾಪಸ್ಸು ಬರುವಳು.

**ಹಾಗ್‌ಬಾರ್ಟ್:** ನಾನು ಮಾತನಾಡಬೇಕಾದ್ದು ನಿನ್ನೊಡನೆ, ಮಿಸಸ್ ಫಾಲ್ಕ್.

**ಲಿಯೊನಾರ್ಡಾ:** ಏನು, ಆಗಟ್‌ನ ವಿಷಯವೆ?

**ಹಾಗ್ ಬಾರ್ಟ್ :** ಹೌದು. ಅವಳ ವಿಷಯದಲ್ಲೂ. ಜೊತೆಗೆ ಮುಖ್ಯ ವಿಷಯಗಳು ಬೇರೆ ಇವೆ.

**ಲಿಯೊನಾರ್ಡ:** ಸ್ವಲ್ಪ ಕಾಯುವುದಕ್ಕೆ ಆಗುವುದಿಲ್ಲವೆ? ಬೇರೆ ಸಮಯ ಸಿಕ್ಕುವ ತನಕ?

**ಹಾಗ್ ಬಾರ್ಟ್:** ನಾನು ಹಡಗಿನಿಂದ ನೆಟ್ಟಗೆ ಇಲ್ಲಿಗೆ ಬಂದೆ, ನೋಡಿದರೆ ಗೊತ್ತಾಗುವುದು —

**ಲಿಯೊನಾರ್ಡ:** ಆಗಟ್‌ನ ವಿಷಯವಾದರೆ, ಅವಳು ಈಗ ಇಲ್ಲಿ ಇಲ್ಲವಲ್ಲ.

**ಹಾಗ್ ಬಾರ್ಟ್:** ಆಗಟ್‌ಗೆ ಸಂಬಂಧಿಸಿದ ವಿಷಯ ಎರಡು ಮಾತಿನಲ್ಲಿ ಮುಗಿಸಬಹುದು. ಅವಳು ಹೇಳಿದ ಮಾತು ನಿಜ — ಅವಳು ಅದನ್ನು ಹೇಳಿದಾಗ ನನಗೆ ಅದು ಇನ್ನೂ ಹೊಳೆದಿರಲಿಲ್ಲ.

**ಲಿಯೊನಾರ್ಡ:** ಅಯ್ಯೋ ದೇವರೆ!

**ಹಾಗ್ ಬಾರ್ಟ್ :** ಆಗಟ್‌ಅನ್ನು ನಾನು ಪ್ರೀತಿಸುತ್ತಿಲ್ಲ.

**ಲಿಯೊನಾರ್ಡ:** ಆಗಟ್ ನಿನ್ನನ್ನು ಪ್ರೀತಿಸುತ್ತಿದ್ದರೆ?

**ಹಾಗ್ ಬಾರ್ಟ್:** ಇತ್ತೀಚೆಗೆ ಅವಳು ನನ್ನನ್ನು ಪ್ರೀತಿಸುತ್ತಿಲ್ಲವೆಂದು ಅವಳ ವರ್ತನೆಯಿಂದಲೇ ಗೊತ್ತಾಗುತ್ತದೆ. ನಿಸ್ಸಂದೇಹವಾಗಿ ಅವಳು ಬಾಯಿಬಿಟ್ಟು ನಿನಗೆ ಹೇಳಲಿಲ್ಲವೆ?

**ಲಿಯೊನಾರ್ಡ:** ಅವಳು–ಅದನ್ನು ನಾನು ಯಾವ ರೀತಿ ಹೇಳಲಿ?– ಅವಳ ಮನಸ್ಸು ಉದ್ರೇಕದಿಂದ ಬಹಳ ಗಲಿಬಿಲಿಯಾಗಿತ್ತು. ಹಾಗಿರುವಾಗ ಅವಳ ಮಾತಿಗೆ ಏನು ಬೆಲೆ ಕೊಡುವುದು?

**ಹಾಗ್ ಬಾರ್ಟ್:** ಹಾಗಾದರೆ ನಿನಗೆ ಅದನ್ನು ಹೇಳಿದಳು — ನನಗೂ ಊಹೆ ಬಂತು; ಏಕೆ, ನನ್ನ ಮನಸ್ಸಿನಲ್ಲಿ ಏನೂ ಅನುಮಾನವೇ ಇರಲಿಲ್ಲ! ಆಗಟ್, ನನ್ನನ್ನು ಪ್ರೀತಿಸುವುದಿಲ್ಲ – ಆದರೆ ನಿನ್ನ ಮೇಲೆ ದೃಢ ಪ್ರೇಮವ ನ್ನಿಟ್ಟಿದ್ದಾಳೆ. ನೀನು ಸುಖವಾಗಿರಬೇಕೆಂಬುದೇ ಅವಳ ಆಶಯ.

**ಲಿಯೊನಾರ್ಡ:** ಆಗಟ್‌ಅನ್ನು ನೀನು ಪ್ರೀತಿಸದಿದ್ದರೆ, ನೀನು ಇಲ್ಲಿಗೆ ಬರಬಾರದಾಗಿತ್ತು.

**ಹಾಗ್ ಬಾರ್ಟ್ :** ಒಂದು ದೃಷ್ಟಿಯಿಂದ ನೀನು ಹೇಳುವುದು ಸರಿ.

ಮೊದಲು ಇಲ್ಲಿಗೆ ಬರುತ್ತಿದ್ದ ಮನುಷ್ಯನಲ್ಲ ಈಗ ನಾನು; **ಈಗ ಇಲ್ಲಿಗೆ** ಬಂದಿರುವ ಕಾರಣವೂ ಬೇರೆ.

**ಲಿಯೊನಾರ್ಡಾ:** ಪುನಃ ನಾನು ಸ್ಪಷ್ಟವಾಗಿ ಹೇಳುತ್ತೇನೆ. ಆಗಟ್ ಅನ್ನು ನೀನು ಪ್ರೀತಿಸದಿದ್ದರೆ, ನೀನು ಇಲ್ಲಿಗೆ ಬರಲು ಯಾವ ಹಕ್ಕೂ ಇಲ್ಲ. ನನಗೆ ಮತ್ತು ಆಗಟ್‌ಗೆ ನೀನು ಅಷ್ಟಾದರೂ ಮರ್ಯಾದೆ ತೋರಿಸ ಬೇಕು.

**ಹಾಗ್ ಬಾರ್ಟ್:** ನಾನು ಈಪೊತ್ತು ಇಲ್ಲಿರುವುದಕ್ಕೆ ಅದಲ್ಲದೆ ಬೇರೆ ಯಾವ ಕಾರಣವೂ ಇಲ್ಲ.

**ಲಿಯೊನಾರ್ಡಾ:** (ಇಷ್ಟು ಹೊತ್ತೂ ಗಿಡದ ಬಳಿ ನಿಂತಿದ್ದವಳು) ಹಾಗಾದರೆ ನಾನು ಹೋಗುತ್ತೇನೆ.

**ಹಾಗ್ ಬಾರ್ಟ್:** ಹಾಗೆ ಮಾಡಬೇಡ.

**ಲಿಯೊನಾರ್ಡಾ:** ನಿನ್ನನ್ನು ನೋಡಿದರೆ ಪೂರ್ತಿ ಬದಲಾಯಿಸಿರುವಂತೆ ಕಾಣುತ್ತೆ.

**ಹಾಗ್ ಬಾರ್ಟ್:** ಅದು ನನ್ನ ದೇವರ ದಯ! ಹಿಂದಿನ ಹಾಗ್‌ಬಾರ್ಟ್‌ಗೆ ನಾನು ಏನೇನೂ ಮರ್ಯಾದೆ ಕೊಡಲಾರೆ. ಸಾಧಾರಣವಾಗಿ ಜನರು ಇಂತಹ ವಿಷಯಗಳನ್ನು ಶೀಘ್ರವಾಗಿ ಇತ್ಯರ್ಥ ಮಾಡಬಲ್ಲರು. ನನಗೆ ಸ್ವಲ್ಪ ಕಾಲ ಹಿಡಿಯಿತು.

**ಲಿಯೊನಾರ್ಡಾ:** ನಿನ್ನ ಮಾತು ನನಗೆ ಏನೂ ಅರ್ಥವಾಗುವುದೇ ಇಲ್ಲವಲ್ಲ.

**ಹಾಗ್ ಬಾರ್ಟ್:** (ಅವಳ ಮಾತು ಮುಗಿಯುವುದರೊಳಗಾಗಿ ಅವಳ ಹತ್ತಿರ ಬಂದು) ನನ್ನ ಮಾತು ನಿನಗೆ ಅರ್ಥವಾಗಿದೆ.

**ಲಿಯೊನಾರ್ಡಾ:** ಅದು ಬಹಳ ಕೆಟ್ಟದ್ದು! ಹುಷಾರ್!

**ಹಾಗ್ ಬಾರ್ಟ್:** ನಿನ್ನ ಕೈ ನಡುಗುತ್ತಿದೆ—!

**ಲಿಯೊನಾರ್ಡಾ:** ನಿಜವಲ್ಲ ಅದು!

**ಹಾಗ್ ಬಾರ್ಟ್:** ನಮ್ಮೆಲ್ಲರಲ್ಲೂ ಒಂದು ಭೂತವಿದೆಯಂತೆ. ಅದನ್ನು ಎಚ್ಚರಿಸಬಾರದೆಂದು ಹೇಳುತ್ತಾರೆ. ಆದು ಬುದ್ಧಿಯಿಲ್ಲದ ಮಾತು. ಅವು ಭೂತಗಳಲ್ಲ. ಅವು ನಮ್ಮ ಪ್ರಾಣೇಂದ್ರಿಯಗಳು.

**ಲಿಯೊನಾರ್ಡಾ:** ಅವುಗಳನ್ನು ನಾವು ಹತೋಟಿಯಲ್ಲಿಟ್ಟುಕೊಂಡಿರಬೇಕು. ನನ್ನ ಜೀವನ ನನಗೆ ಆ ಪಾಠ ಕಲಿಸಿದೆ. ಆ ಪಾಠ ಕಲಿಯಲು ಬಹಳ ಕಷ್ಟಪಡಬೇಕಾಯಿತು. ಈಗ ಆ ಪಾಠದ ಉಪಯೋಗವನ್ನು ಪಡೆಯಬೇಕು.

**ಹಾಗ್‌ಬಾರ್ಟ್:** ನಿಜವಾಗಿಯೂ ಸತ್ಯದ ಪ್ರೇರಣೆ ನನಗಿಲ್ಲದಿದ್ದರೆ ನಾನು ಇಂದು ನಿನ್ನ ಮುಂದೆ ನಿಲ್ಲುತ್ತಿರಲಿಲ್ಲ. ಬಹಳ ದಿನಗಳು ಮನಸ್ಸಿನಲ್ಲಿ ಹೆಣಗಾಡಿದೆ. ಆ ಸಂದರ್ಭದಲ್ಲಿ ಒಂದಾದ ಮೇಲೆ ಒಂದು ನನ್ನ ದುರಭಿಪ್ರಾಯಗಳನ್ನೆಲ್ಲಾ ಬಿಟ್ಟೆ. ಇದರಿಂದ ನನ್ನ ಆತ್ಮಕ್ಕೆ ಗೋಚರವುಂಟಾಯಿತು. ಆದರಿಂದ ಧೈರ್ಯವಾಗಿ ಮುಂದುವರಿಯಲು ಸಾಧಕವಾಯಿತು. ಅದು ಕೊನೆಗೆ ನನ್ನನ್ನು ನಿನ್ನ ಬಳಿಗೆ ತಂದಿದೆ. ಇನ್ನು ಮುಂದೆ ನಾವಿಬ್ಬರೂ ಜೊತೆಯಲ್ಲಿ ನಡೆಯಬೇಕು.

**ಲಿಯೊನಾರ್ಡಾ:** ಆಗಬಹುದಾಗಿತ್ತು, ಒಂದು ವೇಳೆ, ಈ ಪ್ರಸಂಗಗಳಿಲ್ಲದೆ ಹೋಗಿದ್ದರೆ.

**ಹಾಗ್‌ಬಾರ್ಟ್:** ನನ್ನ ಪ್ರೀತಿಯೆಲ್ಲಾ ನಿನ್ನ ಮೇಲೆ ಮೊದಲಿನಿಂದಲೂ ಅವಳ ನೆಪದಲ್ಲಿ ನಿನ್ನನ್ನೇ ಪ್ರೀತಿಸುತ್ತಿದ್ದದ್ದು. ನಿನ್ನಲ್ಲಿ ನಾನು ಮೋಹಗೊಂಡಿದ್ದೇನೆ.

**ಲಿಯೊನಾರ್ಡಾ:** ಹಾಗಾದರೆ, ನನ್ನನ್ನು ಗೌರವಿಸಿ – ಈಗ ಹೊರಟುಹೋಗು.

**ಹಾಗ್‌ಬಾರ್ಟ್:** ಲಿಯೊನಾರ್ಡಾ !

**ಲಿಯೊನಾರ್ಡಾ:** ಕೂಡದು – ಕೂಡದು (ಅವನಿಂದ ಹಿಂಜರಿಯುವಳು.) ಅಯ್ಯೋ ದೇವರೆ ಇದು ಏಕೆ ಸಂಭವಿಸಿತು ?

**ಹಾಗ್‌ಬಾರ್ಟ್:** ಇದು ಹೆಜ್ಜೆ ಮೇಲೆ ಹೆಜ್ಜೆ ಇಟ್ಟು, ಕ್ರಮೇಣ ನಮ್ಮಿಬ್ಬರಿಗೂ ಆದ ಸ್ಥಿತಿ. ನಮ್ಮ ದಾರಿಯಲ್ಲಿ ಇದ್ದ ಅಡಚಣೆಗಳು ಸ್ನೇಹಿತರಂತೆ ನಮಗೆ ಸಹಾಯವಾಗಿ ನಮ್ಮಿಬ್ಬರನ್ನೂ ಕೂಡಿಸಿವೆ. ಸುಖದಿಂದಿರಲು ನನ್ನಂತೆಯೆ ಮನಸ್ಸು ಮಾಡು.

**ಲಿಯೊನಾರ್ಡಾ:** ಸುಖಪಡಲು ನನಗೆ ಅರ್ಹತೆ ಇಲ್ಲ. ಅದನ್ನು ನಾನು ನಿರೀಕ್ಷಿಸಿಯೂ ಇಲ್ಲ.

**ಲಿಯೊನಾರ್ಡಾ:** ಏನು ರೂಪು ನಿನ್ನದು! ಎಷ್ಟು ಒಳ್ಳೆಯ ಗುಣ ನಿನ್ನದು! ಎಂತಹ ರುಜುಸ್ವಭಾವ ನಿನ್ನದು! ಇದಕ್ಕೋಸ್ಕರ ನೀನು ಏನೇನು ಕಷ್ಟಪಡಬೇಕಾಯಿತೋ, ಏನೇನು ಅನುಭವಿಸಬೇಕಾಯಿತೋ ನನಗೆ ತಿಳಿಯದು. ಆದರೆ ಒಂದು ವಿಷಯ ನನಗೆ ಖಚಿತವಾಗಿ ಗೊತ್ತಿದೆ. ನಿನ್ನಲ್ಲಿ ಕಂಡ ತಪ್ಪುಗಳನ್ನು ಖಂಡಿಸಿ ಜನರು ಆಕ್ಷೇಪಿಸದಿದ್ದರೆ, ನೀನು ಸಾಧಿಸಿರುವ ಕಾರ್ಯಗಳಿಗೆ ನಾನು ಒಲಿದು ನಿನ್ನನ್ನು ಪ್ರೀತಿಸುವುದಕ್ಕಾಗುತ್ತಿರಲಿಲ್ಲ. ಆದಕ್ಕೋಸ್ಕರವಾದರೂ ನೀನು ನನಗೆ ಸ್ವಲ್ಪ ಗಣ್ಯತೆ ಕೊಡಬಹುದೆಂದು ಎಣಿಸಿದ್ದೇನೆ.

**ಲಿಯೊನಾರ್ಡಾ:** ಅದಕ್ಕೆ ನನ್ನ ಹೃತ್ಪೂರ್ವಕ ವಂದನೆಗಳು! ಆದರೆ ಪ್ರಪಂಚದಲ್ಲಿ ಅಂತಹ ಸಂಘಟನೆಗಳನ್ನು ಸಂಮಾನಿಸುವುದಿಲ್ಲ ಯುವಕನಾದವನು ತನ್ನ ವಯಸ್ಸನ್ನು ಮೀರಿದ ಹೆಂಗಸನ್ನು ಮೋಹಿಸುವುದನ್ನು ಒಪ್ಪುವುದಿಲ್ಲ, ಮತ್ತು ಒಂದು ವೇಳೆ —

**ಹಾಗ್‌ಬಾರ್ಟ್:** ಆ ರೀತಿಯಾದ ಜನರ ಆಡಿಕೆಗೆ ನಾನು ಯಾವಾಗಲೂ ಕಿವಿಕೊಟ್ಟಿಲ್ಲ — ಸಂಪ್ರದಾಯಬದ್ಧನಾಗಿ ದುರಭಿಪ್ರಾಯಗಳನ್ನು ತುಂಬಿಕೊಂಡಿದ್ದ ಕಾಲದಲ್ಲೂ ಆ ಆಡಿಕೆಗಳಿಗೆ ಕಿವಿಗೊಡಲಿಲ್ಲ! ನನಗೆ ಬೇಕಾದ್ದು ನಿನ್ನ ಅಭಿಪ್ರಾಯ – ನಿನ್ನದು ಮಾತ್ರ!

**ಲಿಯೊನಾರ್ಡಾ:** ಅದಕ್ಕೆ ನನ್ನ ಉತ್ತರವಿದು. ಒಬ್ಬೊಂಟಿಯಾಗಿರುವಾಗ್ಗೆ ಜನರ ಅಥವಾ ಸಮಾಜದ ಸಹಾನುಭೂತಿಯಿಲ್ಲದೆ ಜೀವನವನ್ನು ಸಾಗಿಸಬಹುದು. ಇಬ್ಬರು ಜೊತೆಯಾಗಿದ್ದಲ್ಲಿ ಅದು ಸಾಧ್ಯವಾಗುವುದಿಲ್ಲ. ಜನರ ಸಿಟ್ಟು ಮತ್ತು ಅಸಮಾಧಾನ ಅತಿ ಶೀಘ್ರವಾಗಿ ಅವರ ನಡುವೆ ಛಳಿಗಾಳಿಯಂತೆ ತಮ್ಮ ಪ್ರಭಾವವನ್ನು ತೋರುವುವು.

**ಹಾಗ್‌ಬಾರ್ಟ್:** ನಿನ್ನ ಉತ್ತರವನ್ನು ಕೇಳಿದರೆ ನಾನು ಇದುವರೆಗೂ ಹೇಳಿದ್ದೆಲ್ಲಾ ಏನೋ ನೀರಸವಾಗಿ ಎಡವಟ್ಟಾಗಿ ತೋರುತ್ತೆ. ಸಂಪ್ರದಾಯವಾಗಿ ದೇವರ ಪೂಜೆಮಂತ್ರಗಳನ್ನು ಹೇಳಿದ ಹಾಗೆ ತೋರುತ್ತೆ. ನಾನೇನು ಮಾಡಲಿ? ನಾನು ನಾನೇ ಆಗಿರಬೇಕು. ನನ್ನನ್ನು ಬೇರೆಯವನಾಗಿ ಮಾಡಲಾರೆ. ನಾನು ಮೋಹಿಸಿ ಪ್ರೀತಿಸುತ್ತಿರುವುದು ನಿನ್ನನ್ನು ಮಾತ್ರವೇ — ಮತ್ಯಾರೂ ಅಲ್ಲವೆಂದು ನನಗೆ ಖಚಿತವಾದ ಮೇಲೆ ನನ್ನ ಭಾಗಕ್ಕೆ ಅತಿ

ಮುಖ್ಯವಾಗಿ ಉಳಿದಿದ್ದು ಒಂದೇ ಒಂದು – ಬಾಕಿಯವುಗಳೆಲ್ಲಾ ಮಾಯ ವಾಗಿ ಹೋಗಿಬಿಟ್ಟವು. ಆದ್ದರಿಂದ ನೀನು ಈಗ ಹೇಳುತ್ತಿರುವುದು ನನಗೆ ಅರ್ಥವಾಗುವುದಿಲ್ಲ. ನಿನ್ನಲ್ಲಿ ನಾನು ಬೇಸರಪಟ್ಟುಕೊಳ್ಳುವ ಹಾಗೆ ಜನರು ಮಾಡಬಹುದೆಂದು ಏನಾದರೂ ಅನುಮಾನಪಡುತ್ತೀಯಾ ?

**ಲಿಯೊನಾರ್ಡ್:** ಈಗಲ್ಲ ; ಮುಂದೆ ಕಾಲಾನುಕ್ರಮವಾಗಿ. ಒಂದು ಸಮಯ ಬರುತ್ತೆ —,

**ಹಾಗ್‌ಬಾರ್ಟ್:** ಹೌದು, ಸಮಯ ಬರುತ್ತೆ! ನಮ್ಮ ಧ್ಯೇಯಗಳನ್ನು ಕಾರ್ಯಗತ ಮಾಡುವ ಕಾಲ! ನಮ್ಮ ಆತ್ಮಸಾಧನೆ – ಆತ್ಮಸಿದ್ಧಿಗಳ ಕಾಲ! ಆ ಕಾಲ ಈಗಾಗಲೇ ಒದಗಿದೆ! ಒಂದು ವೇಳೆ ನಮ್ಮಲ್ಲಿ ವಿರೋಧಭಾವನೆ ಗಳುಂಟಾಗಿರಬಹುದು; ದೇವರ ಇಚ್ಛೆಯಿದ್ದರೆ ಅದೂ ಬರಲಿ! ಅದನ್ನು ಈಗ ನಾವು ಗಣನೆಗೆ ತೆಗೆದುಕೊಳ್ಳಬೇಕೆ? ಎಂದಿಗೂ ಇಲ್ಲ. ನೀನು ಸ್ವತಂತ್ರಳು ; ನಾನೂ ಸ್ವತಂತ್ರನು : ನಮ್ಮ ಭವಿಷ್ಯ ನಮ್ಮ ಕೈಯಲ್ಲಿದೆ !

**ಲಿಯೊನಾರ್ಡ್:** ಅದೂ ಅಲ್ಲದೆ ನನಗೂ ವಯಸ್ಸಾಯಿತು —

**ಹಾಗ್‌ಬಾರ್ಟ್:** ಏನು, ನಿನಗೆ ವಯಸ್ಸಾಯಿತು ?

**ಲಿಯೊನಾರ್ಡ್:** ನನ್ನದು ಮತ್ಸರ ಸ್ವಭಾವ ; ಇತರರಿಗೆ ತೊಂದರೆ ಕೊಡುವ ಸ್ವಭಾವ; ನಿನ್ನನ್ನು ನೋಡಿದರೆ ಯೌವನ ಮತ್ತು ಸುಖ ಸಂತೋಷಗಳ ಅವತಾರಮೂರ್ತಿಯಾಗಿದ್ದೀಯೆ !

**ಹಾಗ್‌ಬಾರ್ಟ್ :** ನನಗಿಂತ ನಿನ್ನಲ್ಲೇ ಯೌವನ ಅಧಿಕವಾಗಿದೆ. ನೀನು ಒಬ್ಬ ವಿಶ್ವಮೋಹಿನಿಯಂತೆ! ಯಾವಜ್ಜೀವವೂ ನೀನು ಈಗ ಮಾಡು ತ್ತಿರುವ ಹಾಗೆ ಚಿತ್ತಾಕರ್ಷಣ ಕೌಶಲ್ಯಗಳನ್ನು ನನಗೆ ತೋರಿಸುತ್ತಿರುವೆ. ಪ್ರತಿವರ್ಷವೂ ನಿನ್ನಲ್ಲಿ ಹೊಸ ಸೊಬಗುಗಳು ಮತ್ತು ಹೊಸ ಹೊಸ ಪಾರ ಮಾರ್ಥಿಕಶಕ್ತಿಗಳು ಹುಟ್ಟಿ ಬೆಳಗುತ್ತಿರುವವು. ನೀನು ಏನು ತಿಳಿದು ಕೊಂಡಿದ್ದೀಯೆ ? ನಾನು ಅರ್ಧಂಬರ್ಧ ಮಾತ್ರ ನಿನ್ನ ಅರಿತಿದ್ದೇನೆ; ನಿನ್ನ ಅರ್ಧಂಬರ್ಧ ಮಾತ್ರ ಪ್ರೀತಿಸುತ್ತಿದೇನೆ – ಎಂತಲೆ? ನಿನ್ನ ಹೃದಯದಲ್ಲಿ ನಾನು ನೆಲಸಿ ನಿನ್ನ ಗಾಢಪ್ರೇಮದ ಕಾವನ್ನು ಅನುಭವಿಸುತ್ತೇನೆ. ತಡಗಟ್ಟ ಲಾರದ ಸತ್ಯಪ್ರೇಮವೇ ನನ್ನನ್ನು ನಿನ್ನೆಡೆಗೆ ಕರೆತಂದಿದೆ. ನಿನ್ನ ನಿಜಾತ್ಮದ ಆಳವನ್ನು ಕಂಡುಹಿಡಿಯಲು ನನ್ನ ಜೀವಮಾನದ ಕಾಲವಷ್ಟೂ ಸಾಲದು !

**ಲಿಯೊನಾರ್ಡಾ:** ನಿನ್ನ ಮಾತುಗಳು ವಸಂತಕಾಲದ ಮಂದಮಾರುತದಂತೆ – ಆಕರ್ಷಿಸಿ ಮನಸ್ಸನ್ನು ಮೋಹಗೊಳಿಸಿ ಮರುಳು ಮಾಡುತ್ತವೆ; ಅದರಂತೆಯೇ ಅನರ್ಥಗಳೂ ಆಗಿವೆ!

**ಹಾಗ್‌ಬಾರ್ಸ್ಟ್:** ನೀನು ನನ್ನನ್ನು ಪ್ರೀತಿಸುತ್ತಿದ್ದೀಯೆ. ಮೊದಲಿಂದಲೂ ಇದು ನನಗೆ ಗೋಚರವಾಗಿತ್ತು. ಈವೊತ್ತು ಇಲ್ಲಿಗೆ ಬಂದ ಕ್ಷಣ ಅದನ್ನು ನಾನು ಕಂಡೆ. ನನಗೆ ತಿಳಿದಿರುವ ಮಟ್ಟಿಗೆ ಇತರರಿಗಿಂತಲೂ ಅತ್ಯಧಿಕವಾಗಿ ಪ್ರೇಮವೇ ನಿನಗೆ ಜೀವದ ಉಸಿರು ಎಂದು ಹೇಳಬಹುದು. ಆ ಕಾರಣದಿಂದಲೇ ನೀನು ಆಶಾಭಂಗಗಳಿಂದ ಕೂಡಿ ಒಂದು ಬರಿದಾದ ಜೀವನಕ್ಕೆ ತುತ್ತಾಗಿದ್ದೀಯೆ. ಇಂತಹ ಸಂದರ್ಭದಲ್ಲಿ ಪ್ರೇಮವು ಕರೆಕೊಟ್ಟರೆ, ಸತ್ಯಪ್ರೇಮವು ಕರೆಕೊಟ್ಟರೆ – ನೀನು ನಡುಗುತ್ತಿದೀಯೆ!

**ಲಿಯೊನಾರ್ಡಾ:** ನೀನು ನನ್ನನ್ನು ಚೆನ್ನಾಗಿ ತಿಳಿದಿದ್ದೀಯೆ! ಇದು ಯಾರಿಗೂ ಸಾಧ್ಯವಿಲ್ಲವೆಂದಿದ್ದೆ! ಆದ್ದರಿಂದ ಸ್ಥೈರ್ಯವೆಲ್ಲಾ ಮಾಯವಾಗಿ, ಕೊನೆಗೆ ಅದಃ —

**ಹಾಗ್‌ಬಾರ್ಸ್ಟ್:** ನಿಜವಾಗಿಯೂ ನಮ್ಮ ಮಾತುಕತೆಗಳ ನಡುವೆ ಅದು ನಿನಗೆ ಕಂಡಿರಬೇಕಲ್ಲವೆ?

**ಲಿಯೊನಾರ್ಡಾ:** ಹೌದು.

**ಹಾಗ್‌ಬಾರ್ಸ್ಟ್:** ಆ ಋಜುವಾತೇ ಸಾಕಲ್ಲವೆ, ನಾವಿಬ್ಬರೂ —?

**ಲಿಯೊನಾರ್ಡಾ:** ಹೌದು, ಅದು ನಿಜ! ನಿನ್ನಿಂದ ಏನನ್ನೂ ಮುಚ್ಚಿಡಲಾರೆ – (ಅಳುವುದಕ್ಕೆ ಪ್ರಾರಂಭಿಸುವಳು.)

**ಹಾಗ್‌ಬಾರ್ಸ್ಟ್:** ಆದರೆ ಈ ದುಃಖಕ್ಕೆ ಕಾರಣ?

**ಲಿಯೊನಾರ್ಡಾ:** ನನಗೆ ತಿಳಿಯದು. ಹಗಲೆಲ್ಲಾ ಅದು ನನ್ನನ್ನು ಕಾಡಿಸುತ್ತದೆ. ರಾತ್ರಿ ಕಾಲದಲ್ಲೂ ನನಗೆ ನಿದ್ರೆಕೊಡದೆ ನನ್ನನ್ನು ಅನುಸರಿಸಿಕೊಂಡಿರುತ್ತೆ! (ಅಸಹಾಯಳಾಗಿ ಅಳುವಳು.)

**ಹಾಗ್‌ಬಾರ್ಸ್ಟ್:** ಹುಟ್ಟೇ ಇಲ್ಲದ ಆ ದುಃಖ ಎಲ್ಲಿಂದ ಬಂತು? ಇತರರ ವಿಷಯದಲ್ಲಿ ಹಾಗಿರಬಹುದು. ನಮ್ಮ ವಿಷಯದಲ್ಲಿ ಹಾಗಲ್ಲ!— ನಮ್ಮ ವಿಷಯದಲ್ಲಿ!

**ಲಿಯೊನಾರ್ಡ್ಡಾ**: ನನ್ನ ಸಂಕಟದಲ್ಲಿ ಯೋಚನೆ ಇಲ್ಲದೆ ಮಾತಾಡಿದೆ. ನಿನ್ನನ್ನು ತಡೆಯಬೇಕೆಂದು ನನ್ನ ತಲೆಗೆ ತೋರಿದ್ದನ್ನು ಹೇಳಿಬಿಟ್ಟೆ. ಆದರೆ ಆದರೆ ಅದು ಹಾಗಲ್ಲ! ಅಯ್ಯೋ ದೇವರೆ! (ಮೂರ್ಛೆಯಾದವಳಂತೆ ಓಲಾಡುವಳು.)

**ಹಾಗ್ ಬಾರ್ಟ್**: (ಅವಳ ಹತ್ತಿರ ಓಡಿಬಂದು) ಲಿಯೊನಾರ್ಡ್ಡಾ!

**ಲಿಯೊನಾರ್ಡ್ಡಾ**: ಇಲ್ಲ– ಇಲ್ಲ – ನನ್ನನ್ನು ಸುಮ್ಮನೆ ಬಿಡು.

**ಹಾಗ್ ಬಾರ್ಟ್**: ನಿನಗಿಂತ ನಿನ್ನ ಪ್ರೇಮ ಬಲಿಷ್ಠವಾಗಿದೆ, ಈಗ ಲಾದರೂ ಒಪ್ಪಿಕೊಂಡು ಅದಕ್ಕೆ ಒಲಿಯಬಾರದೆ?

**ಲಿಯೊನಾರ್ಡ್ಡಾ** ಹಾಗ್‌ಬಾರ್ಟ್ – ಮಾಡಬಾರದ್ದು ಮಾಡುವ ಹಾಗೆ —ಅದು ಏನೋ ಸರಿಯಾದ ಮಾರ್ಗದ ಹಾಗೆ ಕಾಣುವುದಿಲ್ಲ —

**ಹಾಗ್ ಬಾರ್ಟ್**: ಅದು ನಡೆದು ಬಂದ ವಿಧಾನವೆ? ಆಗಟ್ ನೆವದಲ್ಲಿ ನಾವಿಬ್ಬರೂ ಕಲೆಯುತ್ತಿದ್ದೇವೆ — ಎಂಬುದೆ? ಹಾಗಲ್ಲದೆ ಮತ್ತಾವ ರೀತಿಯಲ್ಲಿ ಅದಕ್ಕೆ ಅವಕಾಶವಿತ್ತು? ಬೇರೆ ಮಾರ್ಗವೇ ಇರಲಿಲ್ಲ.

**ಲಿಯೊನಾರ್ಡ್ಡಾ**: ಬರಿಯ ಮಾತುಗಳಿಂದ ಏನೂ ಆಗುವುದಿಲ್ಲ. ನಾನು ನಿಧಾನವಾಗಿ ಯೋಚನೆ ಮಾಡಬೇಕು. ನಾನು ಆಗಟ್‌ನೊಡನೆ ಮಾತಾಡಬೇಕು.

**ಹಾಗ್ ಬಾರ್ಟ್**: ಆಗಟ್‌ನೊಡನೆ ನೀನು ಮಾತನ್ನಾಡಿ ಆಗಿದೆಯಲ್ಲ. ನಿನಗೆ ಖಚಿತವಾಗಿ ತಿಳಿದಿದೆಯಲ್ಲವೆ? ನನ್ನನ್ನು ಪ್ರೀತಿಸುತ್ತಿರುವುದು ನೀನು, ಅವಳಲ್ಲ, ಎಂಬುದಾಗಿ. ಅಲ್ಲದೆ ನಾನು ಪ್ರೀತಿಸುತ್ತಿರುವುದು ಅವಳನ್ನಲ್ಲ, ನಿನ್ನನ್ನು, ಎಂದು! ಹೆಚ್ಚು ಇನ್ನೇನು ಬೇಕು.

**ಲಿಯೊನಾರ್ಡ್ಡಾ**: ನನಗೆ ಸ್ವಲ್ಪ ಅವಕಾಶಬೇಕು. ನನ್ನ ಮನಸ್ಸನ್ನು ನಾನು ದಮನ ಮಾಡಬೇಕು. ವರ್ಷಾಂತರಕಾಲ ವೈರಾಗ್ಯಬುದ್ಧಿಯಿಂದ ಸ್ವಾರ್ಥತ್ಯಾಗ ಮಾಡಿ ಆ ಮನಶ್ಶಕ್ತಿಯನ್ನು ಪಡೆದೆ. ಪಡೆದೆನೆಂದು ಹೆಮ್ಮೆ ಪಡುತ್ತಿದ್ದೆ. ಈಗ ಆ ಶಕ್ತಿಯನ್ನು ಕಳೆದುಕೊಳ್ಳಲಾರೆ. ಆದರೆ ನೀನು ನನ್ನೊಡನೆ ಮಾತಾಡುತ್ತಿದ್ದರೆ ನನ್ನ ಮನಸ್ಸು ನನ್ನ ಸ್ವಾಧೀನದಲ್ಲಿರುವುದಿಲ್ಲ. ನಾನು ಎಷ್ಟು ಪ್ರಯತ್ನಪಟ್ಟರೂ ನಿನ್ನ ಮಾತುಗಳು ನನ್ನನ್ನು ತಮ್ಮ ವಶ

ಮಾಡಿಕೊಂಡುಬಿಡುತ್ತವೆ. ಪ್ರಪಂಚದಲ್ಲಿ ಸುಖವೆನ್ನುವುದು ಏನಾದರೂ ಇದ್ದರೆ "ಒಬ್ಬರ ಮನಸ್ಸಿನ ಯೋಚನೆಗಳು ಮತ್ತೊಬ್ಬರಿಗೆ ತಪ್ಪಿಲ್ಲದೆ ತಿಳುವಳಿಕೆಯಾಗುವುದು" ಎಂದು ಹೇಳಬಹುದು. ನೀನು ನನ್ನನ್ನು ಹಾಗೆ ಚೆನ್ನಾಗಿ ಅರಿತಿರುವೆ. ಆದರೆ ಆ ಸುಖದೊಡನೆ ಏನಾದರೂ ಒಂದು ನೋವು ಅಥವಾ ಸಂಕಟ ಅಪ್ಪಿಕೊಡಿರುವುದು—ಇತರರಿಗೆ ಹಾಗಿಲ್ಲದಿದ್ದರೂ ನನ್ನ ಪಾಲಿಗೆ ಅದು ಹಾಗೆ ಆಗಿದೆ. ಬೇಡ–ನನಗೆ ಪ್ರತ್ಯುತ್ತರ ಕೊಡಬೇಡ. ನನಗಿಂತಲೂ ವೀರ್ಯವತ್ತಾದ ದೃಢಮನಸ್ಸು ನಿನ್ನದು. ನಾನು ನಿನ್ನ ಸಮಾನಳು ಎಂದಿಗೂ ಅಲ್ಲ. ಅದಕ್ಕೆ ಮುಖ್ಯಕಾರಣ—ನಾನೂ ನಿನ್ನನ್ನು ಮೋಹಿಸಿ ಪ್ರೀತಿಸುತ್ತಿದ್ದೇನೆ; ಅಂಥಾ ಪ್ರೇಮವು ನನ್ನ ಭಾಗಕ್ಕೆ ಬರುವುದು, ಅಂಥಾ ಪ್ರೇಮ ನನಗೆ ಎಂದಾದರೂ ಸಿಲುಕುವುದೇ ಎಂದು ಶಂಕಿಸುತ್ತಾ ನಾನು ನಿನ್ನನ್ನು ಮೋಹಿಸಿ ಪ್ರೀತಿಸುತ್ತಿದೇನೆ. ಈಗ ನನ್ನ ಮನಶ್ಶಾಂತಿಯೆಲ್ಲಾ ಕುಲುಕಾಡಿಹೋಗಿದೆ. ನನ್ನ ಮಗುವಿಗೆ ನಾನು ದ್ರೋಹಿಯಾದೆನೆ? ಎಂದು ಮನಸ್ಸಿನಲ್ಲಿ ತೊಂದರೆಪಡುತ್ತೇನೆ.

**ಹಾಗ್‌ಬಾರ್ಟ್:** ಹಾಗೇನೂ ಇಲ್ಲವೆಂದು ನಿನಗೆ ಚೆನ್ನಾಗಿ ಗೊತ್ತಿದೆಯಲ್ಲ!

**ಲಿಯೊನಾರ್ಡಾ:** ಹೇಗೆ ಹೇಳಲಿ? ಯೋಚಿಸುವುದಕ್ಕೆ ನನಗೆ ಸ್ವಲ್ಪ ಕಾಲ ಬೇಕು. ಏನೋ ಹೆದರಿಕೆಯಾಗುತ್ತದೆ. ಆ ಹೆದರಿಕೆ ಹಿಂದಿನ ಅನೇಕ ನೆನಪುಗಳನ್ನು ಮನಸ್ಸಿಗೆ ತರುತ್ತದೆ. ಎಲ್ಲದಕ್ಕಿಂತಲೂ ಹೆಚ್ಚಾಗಿ ನಿನ್ನ ಮೇಲಿರುವ ನನ್ನ ಪ್ರೇಮಾತಿರೇಕ ನನಗೆ ಹೆದರಿಕೆಯನ್ನುಂಟುಮಾಡುತ್ತಿದೆ. ನನ್ನ ಜೊತೆಯಲ್ಲಿ ನಿನ್ನನ್ನು ಸೆಳೆದುಕೊಂಡು ಯಾವುದಾದರೂ ಅನರ್ಥಗಳ ಗುಂಡಿಯಲ್ಲಿ ಸಿಕ್ಕಿಸುತ್ತೇನೆಂಬ ಭಯ ನನ್ನನ್ನು ಬಾಧಿಸುತ್ತಿದೆ. ಬೇಡ–ನನಗೆ ಪ್ರತ್ಯುತ್ತರ ಕೊಡಬೇಡ! ನನ್ನನ್ನು ಮುಟ್ಟಬೇಡ–ಹಾಗ್‌ಬಾರ್ಟ್–ನನ್ನನ್ನು ನಿಜವಾಗಿಯೂ ಪ್ರೀತಿಸುತ್ತೀಯಾ?

**ಹಾಗ್‌ಬಾರ್ಟ್:** ಕೇಳಬೇಕೆ ಅದನ್ನ?

**ಲಿಯೊನಾರ್ಡಾ:** ಹಾಗಾದರೆ, ನನಗೆ ಸಹಾಯಮಾಡು? ಈಗ ಹೊರಟುಹೋಗು. ದಯೆ ತೋರಿಸು. ನನ್ನ ವಿಜಯ ನನ್ನ ಹೃದಯದಲ್ಲಿ ಅಡಗಿರಲಿ. ಆ ವಿಜಯದಲ್ಲಿ ನಿನ್ನ ಮಹಿಮೆ ತುಂಬಿದೆ. ಈ ನೆಚ್ಚಿಕೆ ಇತರ

ಹೆಂಗಸರಿಗೆ ಅನವಶ್ಯಕವಾಗಿರಬಹುದು, ಆದರೆ ನನಗೆ ಅದು ಬೇಕು! ನೀನು ಹೋಗಿಬಾ.

**ಹಾಗ್‌ಬಾರ್ಟ್:** ಲಿಯೊನಾರ್ಡಾ!

**ಲಿಯೊನಾರ್ಡಾ:** ನಾನು ಹೇಳಿ ಕಳಿಹಿಸುವ ತನಕ ಕಾದಿರು. ಶಾನೆ ದಿನಗಳು ಇಲ್ಲ! ಏನಾದರೂ ಕೂಡ ಸಹನೆಯಿಂದಿರು — ಮತ್ತು ನಾನು ಪ್ರೀತಿಸುತ್ತಿದೇನೆಂಬುದನ್ನು ಸದಾ ನೆನಪಿನಲ್ಲಿಟ್ಟಿರು. ಬೇಡ — ಪ್ರತ್ಯುತ್ತರ ಬೇಡ! ಇನ್ನಾವ ಹೆಚ್ಚು ಪ್ರಸಂಗಗಳಿಗೂ ನನಗೆ ಧೈರ್ಯವಿಲ್ಲ. ಶಕ್ತಿಯೂ ಇಲ್ಲ. (ಅವಳ ದನಿ ಕುಗ್ಗಿ ಹೋಗುತ್ತಿದೆ.) ಹೋಗು — (ಹೋಗಲು ತಿರುಗುವನು) ಹಾಗ್‌ಬಾರ್ಟ್ – (ಅವನು ನಿಲ್ಲುವನು.) ಈವೊತ್ತು ನೀನು ಹೇಳಿದ ಮಾತುಗಳು ನಾನು ಎಂದೂ ಅನುಭವಿಸದ ಪರಮಾನಂದವನ್ನು ಉಂಟುಮಾಡಿವೆ! ಆದರೆ ಈಗ ನೀನು ಏನೂ ಹೇಳದೆ ಹೊರಟುಹೋದರೆ ಅದು ಎಲ್ಲದಕ್ಕಿಂತ ಹೆಚ್ಚಾಗಿರುತ್ತದೆ!

(ಅವನು ಹೊರಟುಹೋಗುವನು.)

**ಲಿಯೊನಾರ್ಡಾ:** (ಸ್ವಲ್ಪ ಕಾಲ ಹರ್ಷಸಮಾಧಿಯಲ್ಲಿ ಇರುವಳು. ಅನಂತರ ಸ್ವಲ್ಪ ತಿರುಗಾಡುವಳು. ಪುನಃ ಸ್ತಬ್ಧಳಾಗಿ ನಿಲ್ಲುವಳು. ಹಠಾತ್ತನೆ ಕೂಗುವಳು.) ಆಗಟ್!

**ಆಗಟ್:** (ಹೊರಗಿನಿಂದ) ನೀನು ಅಲ್ಲಿದ್ದೀಯಾ?

**ಲಿಯೊನಾರ್ಡಾ:** ನನ್ನ ಮುದ್ದು ಕಂದ! (ಹೊರಗೆ ಹೋಗಿ ಆಗಟ್‌ಅನ್ನು ಎತ್ತಿಕೊಂಡು ವಾಪಸ್ಸು ಬರುವಳು.) ಏನು, ನಡೆದುಕೊಂಡು ಬಂದೆಯಾ?

**ಆಗಟ್:** ಎಲ್ಲ ದಾರಿಯನ್ನೂ. (ತನ್ನ ಟೋಪಿಯನ್ನು ಕೈಲಿ ಹಿಡಿದುಕೊಂಡಿರುವಳು. ನಡೆದುಬಂದದ್ದರಿಂದ ಮುಖ ಬಿಸಿಯಾಗಿ ಕಾಣುತ್ತೆ. ಮುಖ ಬಿಸಿಲುಗಂದಿದೆ. ಬಹಳ ದೂರ ನಡೆದು ಆಯಾಸಪಟ್ಟಿರುವಂತೆ ಕಾಣುವಳು. ಬೆನ್ನಿನ ಮೇಲೆ ನೇತಾಡುತ್ತಿದ್ದ ಒಂದು ಬುತ್ತಿ ಚೀಲವನ್ನು ತೆಗೆಯುವಳು.) ಈ ಬೆಳಗ್ಗೆ ನದಿಯಲ್ಲಿ ಮುಖ ತೊಳೆದುಕೊಂಡೆ. ಅದನ್ನೆ ಕನ್ನಡಿಯಾಗಿಯೂ ಉಪಯೋಗಿಸಿಕೊಂಡೆ.

**ಲಿಯೊನಾರ್ಡಾ:** ರಾತ್ರಿಯೆಲ್ಲ ನಡೆಯುತ್ತಿದ್ದೆಯಾ?

**ಆಗಟ್** : ಇಲ್ಲ. ಓಪ್ಸಾಲ್‌ನಲ್ಲಿ ಸ್ವಲ್ಪ ಹೊತ್ತು ಮಲಗಿಕೊಂಡಿದ್ದೆ. ಸೂರ್ಯೋದಯಕ್ಕೆ ಮುಂಚಿತವಾಗಿ ಎದ್ದಿದ್ದೆ. ನನ್ನ ಮನಸ್ಸಿಗೆ ಬಹಳ ಚೆನ್ನಾಗಿತ್ತು.

**ಲಿಯೊನಾರ್ಡಾ**: ಇದೇ ತಾನೆ ನಿನ್ನನ್ನು ವಾಪಸ್ಸುಕರೆಸಲು ಏರ್ಪಾಡು ಮಾಡುತ್ತಿದ್ದೆ.

**ಆಗಟ್** : ಹಾಗೆಯೆ ? ಹಾಗಾದರೆ ಅವರು ಹೋಗಿ ಅಲ್ಲಿರುವ ನನ್ನ ಸಾಮಾನುಗಳನ್ನು ತರಬಹುದು. ನಾನು ಅಲ್ಲಿ ಇನ್ನು ಹೆಚ್ಚು ಕಾಲವಿರಲು ಆಗುವುದಿಲ್ಲ.

**ಲಿಯೊನಾರ್ಡಾ**: ಸರಿಯಮ್ಮ. ನೋಡುವುದಕ್ಕೆ ತುಂಬಾ ಚೆನ್ನಾಗಿ ಕಾಣುತ್ತೀಯೆ !

**ಆಗಟ್** : ನನ್ನ ಮುಖ ಬಿಸಿಲುಗಂದಿರುವುದರಿಂದ ಹಾಗೆ ಕಾಣುವುದೆಂದು ತೋರುತ್ತದೆ.

**ಲಿಯೊನಾರ್ಡಾ**: ಹಾಗಾದರೆ ನಿನ್ನ ಮನಸ್ಸು ನೆಮ್ಮದಿಯಾಗಿದೆ ತಾನೆ ಈಗ ?

**ಆಗಟ್** : ಛೇಷಾಗಿದೆ, ಅತ್ತೆ. ಈಗ ಅದೆಲ್ಲ ಮುಗಿದುಹೋಗಿದೆ— ಅಜ್ಜಿಯಿಂದ ನನಗೆ ಒಂದು ಕಾಗದ ಬಂದಿದೆ.

**ಲಿಯೊನಾರ್ಡಾ**: ನಾನು ಕಳುಹಿಸಿಕೊಟ್ಟ ಕಾಗದ ಅದೇಯೊ? ಅಕ್ಷರದ ಗುರುತು ನನಗೆ ಸಿಕ್ಕಲಿಲ್ಲ.

**ಆಗಟ್** : ಹೌದು ಅದು ಅಜ್ಜಿಯ ಕಾಗದ, ಇಲ್ಲಿದೆ. ನೀನು ಅದನ್ನು ಕೇಳಬೇಕು.

**ಲಿಯೊನಾರ್ಡಾ**: ಆಗಲಿ.

**ಆಗಟ್** : (ಓದುವಳು.) ಮಗುವೆ, ನಾನು ಕಾಗದಗಳನ್ನು ಬರೆದು ಅನೇಕ ವರ್ಷಗಳಾದವು. ಆದ್ದರಿಂದ ಈ ಕಾಗದ ಹೇಗೆ ಇರುತ್ತೋ ನಾನು ಊಹಿಸಲಾರೆ. ಹಾಗ್‌ಬಾರ್ಟ್ ಊರಲ್ಲಿ ಇಲ್ಲದೆ ಇರುವುದರಿಂದ ನಾನೇ ನಿನಗೆ ವಿಷಯವನ್ನು ತಿಳಿಸಬೇಕು. ಇನ್ನು ಮೇಲೆ ಮನಸ್ಸಿನಲ್ಲಿ ಯಾವ ಚಿಂತೆಯನ್ನೂ ಇಟ್ಟುಕೊಳ್ಳಬೇಡ. ನೀನು ಮದುವೆ ಮಾಡಿಕೊಂಡ ಒಡನೆ ನಾನು ನಿಮ್ಮ ಸಂಗಡ ವಾಸವಾಗಿರುತ್ತೇನೆ.” ಅತ್ತೆ, ಅಜ್ಜಿಯ ಸ್ವಭಾವ

ಎಷ್ಟು ಘನವಾದದ್ದು! (ಆನಂದದಿಂದ ಲಿಯೊನಾರ್ಡಾ ಕತ್ತಿನ ಸುತ್ತ ತನ್ನ ತೋಳು ಗಳನ್ನು ಬಾಚಿಹಾಕಿ ತಬ್ಬಿಕೊಳ್ಳುವಳು.)

**ಲಿಯೊನಾರ್ಡಾ:** ಅದರೆ—?

**ಆಗಟ್:** ಆದರೇನೂ ಇಲ್ಲ, ಗೀದರೇನೂ ಇಲ್ಲ. ನಿನಗೆ ಕಾಣುವು ದಿಲ್ಲವೆ? ಎಲ್ಲವೂ ನಿನಗೋಸ್ಕರವಾಗಿಯೇ!

**ಲಿಯೊನಾರ್ಡಾ:** ನನಗೋಸ್ಕರವಾಗಿಯೆ? ಸರಿ, ಸರಿ, ಆದರೆ—ನಿನ್ನ ವಿಷಯವೇನು? ಹಾಗ್‌ಬಾರ್ಸ್ಟ್‌ಗೂ ನಿನಗೂ ಈಗ ಹೇಗಿದೆ?

**ಆಗಟ್:** ಓ, ಆ ವಿಷಯವೆ? ಆಗಲಿ, ಕತೆಯನ್ನೆಲ್ಲಾ ಪೂರ್ತ ಹೇಳುತ್ತೇನೆ! ಈಗ ಅದನ್ನು ಹೇಳುವುದಕ್ಕೆ ಆಗುತ್ತೆ. ಅದು ಏನೋ ಒಂದು ದೊಡ್ಡ ಪ್ರಮಾದವೆಂದು ನೀನು ಎಣಿಸುತ್ತಿರುವಂತಿದೆ. ಹಾಗೇನೂ ಅಲ್ಲ. ಕೂತುಕೊಂಡು ಮಾತಾಡೋಣ. (ಒಂದು ಕುರ್ಚಿಯನ್ನು ತರುವಳು.) ಸ್ವಲ್ಪ ಕೂತುಕೊಂಡು ಸುದಾರಿಸಿಕೊಳ್ಳಬೇಕೆಂದೆನಿಸುತ್ತೆ ನನಗೂ ಕೂಡ! ಅದು ಅನಿರೀಕ್ಷಿತವಾಗಿ ನನ್ನ ಮೈಮೇಲೆ ಬಿದ್ದು ಕವಿದುಕೊಂಡಹಾಗಾಯಿತು! ಹಿಂದಿನಿಂದ ಬಂದು ಪೆಟ್ಟುಕೊಟ್ಟ ಹಾಗೆ. ತಿಳಿಯಿತೆ, ಅತ್ತೆ? ಈಗ ನೀನು ಮನಸ್ಸಿನಲ್ಲಿ ಏನೇನೋ ಯೋಚಿಸಿ ತೊಂದರೆಪಡಬೇಡ. ಆ ಅಧ್ಯಾಯ ಈಗ ಮುಗಿದಂತೆಯೇ! ಅದು ಪ್ರಾರಂಭವಾದದ್ದು ಹೇಗೆ ಗೊತ್ತೆ? ನಾವಿಬ್ಬರೂ ನೋಡಿದ ಒಂದು ನಾಟಕದಿಂದ ಅದು ಆರಂಭವಾಯಿತು.

**ಲಿಯೊನಾರ್ಡಾ:** ಒಂದು ನಾಟಕ? ಹಾಗೆಂದರೇನು?

**ಆಗಟ್:** ನಾವಿಬ್ಬರೂ ಜೊತೆಯಲ್ಲಿ ಆ ನಾಟಕವನ್ನು ನೋಡಿದೆವು. ಜ್ಞಾಪಕವಿಲ್ಲವೆ? ಅದು ಯಾವನೋ ಕವಿ ವಿರಚಿಸಿದ್ದು—"ತರುಣಿಯರ ಹೋರಾಟ"

**ಲಿಯೊನಾರ್ಡಾ:** ಹೌದು, ಜ್ಞಾಪಕಕ್ಕೆ ಬಂತು.

**ಆಗಟ್:** ಆ ನಾಟಕ ನೋಡಿದ ಮೇಲೆ ನಾನು ಯೋಚನೆಮಾಡಿ ಹೇಳಿದ್ದು ನನ್ನ ನೆನಪಿಗೆ ಈಗ ಬರುತ್ತೆ. ಕಥಾನಾಯಕ ಹೆನ್ರಿ ಎಂಬ ವನಿಗೆ ಕೊಂಚವೂ ಬುದ್ಧಿ ಇರಲಿಲ್ಲ. ಕತೆಯಲ್ಲಿ ಇಬ್ಬರು ಹೆಂಗಸರು ಬರುತ್ತಾರೆ. ಹೆನ್ರಿ ಒಬ್ಬಳನ್ನು ಚುನಾಯಿಸಬೇಕು. ಒಬ್ಬಳು ರೂಪವತಿ ಯಾಗಿ, ದೃಢ ಮನಸ್ಕಳಾಗಿ, ಉತ್ಸಾಹಭರಿತಳಾಗಿ, ಹುರುಪಿನಿಂದಿರುವ

ಪ್ರೌಢಳು; ಮತ್ತೊಬ್ಬಳು ಪೆದ್ದುಪೆದ್ದಾದ ಬೊಂಬೆಯಂತಿದ್ದ ಹುಡುಗಿ. ಮೊದಲನೆಯವಳು ಅವನಿಗೋಸ್ಕರ ತನ್ನ ಪ್ರಾಣವನ್ನಾದರೂ ಕೊಡಲು ಸಿದ್ಧಳಾಗಿದ್ದಳು ಹಾಗಿದ್ದರೂ ಹೆನ್ರಿ ಕೆಲಸಕ್ಕೆಬಾರದ ಆ ಚಿಕ್ಕಹುಡುಗಿಯನ್ನು ಒಪ್ಪಿದ! ನಾನು ಸ್ವಲ್ಪ ಕೂತುಕೊಂಡು ಸಿಧಾನವಾಗಿ ಹೇಳುತ್ತೇನೆ. ನೀನು ಆಕಾಶವೇ ಕಳಚಿ ಬಿದ್ದಂತೆ ಸುಮ್ಮನೆ ನನ್ನನ್ನೇ ನೋಡುತ್ತಿರಬೇಡ, ಆ, ಈಗ ಸರಿಯಾಯಿತು! ಇನ್ನು ನಾನು ಹೇಳುವುದು ನಿನಗೆ ಸ್ವಲ್ಪ ಹುಚ್ಚುಮಾತುಗಳಂತೆ ಕಾಣಿಸಬಹುದು. ಆದರೂ ಹೇಳುತ್ತೇನೆ. ಆ ನಾಟಕದ ವಿಷಯ ಯೋಚಿಸುತ್ತಾ ನನ್ನ ಮನಸ್ಸಿಗೆ ಒಂದು ಸ್ಫೂರ್ತಿ ಹೊಳೆಯಿತು! ಏಕೆ ಎಂಬುದು ದೇವರಿಗೇ ಗೊತ್ತು! ನಾಟಕದ ಪ್ರೌಢ ಸ್ತ್ರೀ ಯಾರಾಗಿರಬಹುದೆಂದರೆ--, ಆ ಗುಂಗುರುಕೂದಲಿನ ಚಿಕ್ಕಬಜಾರಿ—, ಮತ್ತು ಅವನು –? ನಾಟಕದಲ್ಲಿ ಹಾಗಿದ್ದರೂ ಹಾಗ್‌ಬಾರ್ಟ್ ಮಾತ್ರ ಬಹಳ ಬುದ್ಧಿವಂತ! ನಾಟಕದಲ್ಲಿ ನಡೆದಂತೆ ಮಾಡದೆ, ಬೇರೆಯಾಗಿ ತನಗೆ ಬೇಕಾದವಳನ್ನು ಚುನಾಯಿಸಿದ! ಮೊದಲು ಮೊದಲು ಇದು ನನಗೆ ತಿಳಿದಿರಲಿಲ್ಲ. ಹಾಗ್‌ಬಾರ್ಟ್ ನಮ್ಮ ಮನೆಗೆ ಬರಲಾರಂಭಿಸಿದ ಕಾಲದಿಂದ, ಯಾವಾಗಲೂ ನಿನ್ನೊಡನೆಯೆ ಮಾತಾಡುತ್ತಿದ್ದ; ನನ್ನೊಡನೆ ಮಾತಾಡಿದರೆ ಆಗಲೂ ಕೂಡ ನಿನ್ನ ವಿಷಯ ಮಾತಾಡುವುದಕ್ಕೋಸ್ಕರವೆ! ಇದನ್ನು ನೋಡಿದ ಮೇಲೆ ನನ್ನ ಮನಸ್ಸಿಗೆ ಬಹಳ ವ್ಯಥೆಯಾಯಿತು, ಬಹಳ ಸಂಕಟಪಟ್ಟೆ! ಯಾರೋ ಒಬ್ಬರು ಬಂದು ನನಗೆ ತಿಳಿಯದ ಹಾಗೆ ನನ್ನ ಎದೆಯನ್ನು ಒಂದು ಚೂರಿಯಿಂದ ಇರಿದ ಹಾಗೆ ಆಯಿತು! ಆ ಕ್ಷಣದಿಂದ —ಹೇಳಲು ನಾಚಿಕೆಯಾಗುತ್ತೆ — ನನಗೆ ಶಾಂತಿಯಿಲ್ಲ — ಶಾಂತಿಯೇ ಹೋಯಿತು. ಹಗಲೂ ರಾತ್ರಿ ಒಂದು ಅಶಕ್ಯವಾದ ದುಃಖ – ಸಂಕಟ – ನೋವನ್ನು ಹೊತ್ತುಕೊಂಡಿರುತ್ತಿದ್ದೆ. ಅವನು ನಿನ್ನೊಡನೆ ಮಾತಾಡುವುದು, ನೀನು ಅವನೊಡನೆ ಮಾತಾಡುವುದು — ಇವುಗಳನ್ನು ಕಂಡರೆ ನನಗೆ ಎದೆ ಒಡೆದು ಚೂರಾಗುತ್ತಿದೆ ಎನ್ನುವ ಹಾಗೆ ನನಗೆ ತೋರುತ್ತಿತ್ತು! ಈಗ ಅದನ್ನು ಹೇಳಲು ನಾಚಿಕೆಯಾಗುತ್ತೆ. ನಿನ್ನೊಡನೆ ಮಾತಾಡಲು ಯಾವಾಗಲೂ ಬೇಸರವಾಗುವುದಿಲ್ಲವೆಂದು ಹೇಳಬೇಕೆ? ಅವನಿಗೆ ಅದು ಸಹಜವಾಗಿಯೇ ಇತ್ತು! ನಿನ್ನೊಡನೆ ಮಾತಾಡುತ್ತಿರುವುದಕ್ಕೆ ನನಗೂ ಬೇಜಾರಾಗುವುದಿಲ್ಲ.

**ಲಿಯೊನಾರ್ಡ್:** ನನಗೆ ಏನೂ ಕಾಣುವುದಿಲ್ಲ! ಒಂದೂ ಅರ್ಥ ವಾಗುವುದಿಲ್ಲ!

**ಆಗಟ್:** ಸ್ವಲ್ಪ ತಾಳು ಅತ್ತೆ, ಏನೋ ಮನಸ್ಸಿನಲ್ಲಿ ಒಂದು ಆತಂಕ ಇಟ್ಟುಕೊಂಡು ನನ್ನನ್ನು ನೋಡಬೇಡ. ಎಲ್ಲ ಮುಗಿಯಿತು, ನಿನಗೆ ಗೊತ್ತಿದೆ ಯಲ್ಲ, ಅತ್ತೆ!

**ಲಿಯೊನಾರ್ಡ್:** ಏನು, ಯಾವುದು ಎಲ್ಲಾ ಮುಗಿಯಿತು?

**ಆಗಟ್:** ಅಯ್ಯೋ ದೇವರೆ, ತಾಳು. ಅತ್ತೆ, ನನಗಿಂತಲೂ ನಿನಗೇಕೋ ಆತುರ ಹೆಚ್ಚಾಗಿದೆ. ಒಂದು ವೇಳೆ ನಾನು ಇರುವುದಕ್ಕಿಂತಲೂ ಕೀಳಾಗಿ ನೀನು ನನ್ನ ಭಾವಿಸಬಹುದು. ಆದ್ದರಿಂದ ನನ್ನ ಆತ್ಮನಿಗ್ರಹ ಕ್ಕೋಸ್ಕರ ನನ್ನೊಡನೆಯೇ ನಾನು ಹೇಗೆ ಕಾದಾಡಿದೆ, ಎಂಬುದನ್ನು ಹೇಳುತ್ತೇನೆ. ನಿನ್ನೊಡನೆ ಮಾತಾಡಿ ನನ್ನ ಕಷ್ಟಸುಖಗಳನ್ನು ಹೇಳಿ ಕೊಳ್ಳಲು ಆಗುತ್ತಿರಲಿಲ್ಲ. ರಾತ್ರಿಯೆಲ್ಲಾ ಮಲಗಿಕೊಂಡು ಅಳುತ್ತಿದ್ದೆ. ಹಗಲುಹೊತ್ತಿನಲ್ಲಿ ಪ್ರಯತ್ನಪಟ್ಟು ಸುಖಸಂತೋಷ ಹರ್ಷೋತ್ಸಾಹಗಳಿಂದ ತುಂಬಿರುವಂತೆ ನಟಿಸುತ್ತಿದ್ದೆ. ಹೀಗೆಯೇ ನಡೆಯುತ್ತಿರುವಾಗ, ಒಂದಾ ನೊಂದು ದಿನ, ನಿಜವಾಗಿಯೂ ನನಗೇ ನಾನು ಒಂದು ಪ್ರಶ್ನೆ ಹಾಕಿ ಕೊಂಡೆ–,"ನಿನಗಿಂತಲೂ ಅವಳನ್ನು ಅವನು ಹೆಚ್ಚಾಗಿ ಪ್ರೀತಿಸುತ್ತಿದ್ದರೆ, ನೀನು ಏಕೆ ಅಸಮಾಧಾನ ಪಟ್ಟುಕೊಳ್ಳಬೇಕು? ಅವಳ ಸಂಗಡ ನಿನ್ನನ್ನು ಹೋಲಿಸಿದರೆ ನೀನು ಎಷ್ಟರವಳು?" ಹಾಗೆಯೇ ಇನ್ನೊಂದು ಯೋಚನೆ ನನಗೆ ತೋರಿತು. ನನ್ನ ಪ್ರಿಯ ಅತ್ತೆ ತಾನು ನಿಜವಾಗಿಯೂ ಪ್ರೀತಿಸಬಲ್ಲವನಾದವನು ಯಾವನಾದರೂ ಸಿಕ್ಕಿದರೆ ಎಷ್ಟು ಛೇಷಾಗಿರುತ್ತೆ! ಎಲ್ಲದಕ್ಕಿಂತಲೂ ಮೇಲಾಗಿ ಅವರಿಬ್ಬರನ್ನೂ ಜೊತೆಗೂಡಿಸಲು ನಾನು ಕಾರಣಳಾದರೆ ಎಷ್ಟು ಚೆನ್ನಾಗಿರುತ್ತೆ!

**ಲಿಯೊನಾರ್ಡ್:** ಹಾಗೆ ನೀನು ಯೋಚಿಸಿದ್ದು ಪ್ರಶಂಸನೀಯ ವಾದದ್ದು, ಆಗಟ್!

**ಆಗಟ್:** ಇರಬಹುದು. ಇದ್ದ ಸ್ಥಿತಿಯನ್ನು ಇದ್ದದ್ದಕ್ಕಿಂತ ಉತ್ತಮ ವಾಗಿ ಕಾಣುವ ಹಾಗೆ ನಾನು ಹೇಳಬಾರದು, ಅತ್ತೆ! ಏಕೆಂದರೆ ನನಗೆ ಆಗಿನ ಸಂದರ್ಭಗಳಲ್ಲಿ ಯಾವಾಗಲೂ ಈಗ ಹೇಳಿದಂತೆ ತೋರುತ್ತಿರಲಿಲ್ಲ.

ಅನೇಕ ವೇಳೆ ದುಃಖದಿಂದ ನನ್ನ ಗಂಟಲು ಹಿಡಿದುಕೊಳ್ಳುತ್ತಿತ್ತು ಹಾಗಾಯಿತೆಂದರೆ ನನಗೇ ನಾನು ಪುನಃ ಹೇಳಿಕೊಳ್ಳುತ್ತಿದ್ದೆ. —"ಒಂದು ವೇಳೆ ಅವಳಿಗೋಸ್ಕರ ನನ್ನ ಸುಖವನ್ನು ತ್ಯಾಗಮಾಡಬೇಕಾದರೂ ಅದು ಬಹಳ ದೊಡ್ಡದಲ್ಲ! ಒಂದು ವೇಳೆ ಅವನು ನಿನ್ನಲ್ಲಿ ಪ್ರೀತಿ ತೋರಿಸದಿದ್ದರೆ ನೀನಾದರೂ ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡಿರಲು ಆಗುವುದಿಲ್ಲವೆ? ಹಾಗೆ ಮನಸ್ಸನ್ನು ದಮನ ಮಾಡದೇ ಇರುವುದು ಹೇಡಿತನ! ಅವನು ನಿನ್ನನ್ನು ಪ್ರೀತಿಸದಿದ್ದರೆ ಅವನ ಯೋಚನೆಯನ್ನೇ ಬಿಟ್ಟುಬಿಡು!" ಎಂದು ಹೇಳಿಕೊಳ್ಳುತ್ತಿದ್ದೆ.

**ಲಿಯೊನಾರ್ಡಾ:** ಆಗಟ್, ನಿನ್ನನ್ನು ಎಷ್ಟು ಮೆಚ್ಚುತ್ತೇನೆ, ಎಷ್ಟು ಪ್ರೀತಿಸುತ್ತೇನೆ, ಎಷ್ಟು ನಿನ್ನ ವಿಷಯದಲ್ಲಿ ಹೆಮ್ಮೆ ಪಡುತ್ತೇನೆ— ಅದನ್ನು ಬಾಯಲ್ಲಿ ಹೇಳಲಾರೆ.

**ಆಗಟ್ :** ಅತ್ತೆ, ಅಲ್ಲಿಯವರೆಗೂ ನೀನು ನನಗೋಸ್ಕರ ಎಷ್ಟು ಮಾಡಿದ್ದೀಯೆ ಎಂಬುದು ವಾಸ್ತವವಾಗಿ ನನ್ನ ಮನಸ್ಸಿಗೆ ಖರೆಯಾಗಿ ತೋರಿರಲಿಲ್ಲ-ಯಾವುದಾದರೂ ಒಂದು ಮಹತ್ಕಾರ್ಯವನ್ನು ಸಾಧಿಸಲು ನನಗೆ ಶಕ್ತಿ ಇದ್ದರೆ, ನಿಜವಾಗಿಯೂ ಒಳ್ಳೆಯದು ಮತ್ತು ಉತ್ಕೃಷ್ಟವಾದ ಗುಣಗಳೇನಾದರೂ ಇದ್ದರೆ–ಅವುಗಳಿಗೆಲ್ಲಾ ನೀನೇ ಮೂಲಕಾರಣಳು. ಪ್ರತಿಯೊಂದು ಸದ್ಭಾವನೆ ಸತ್ಪ್ರೇರಣೆ ಇವುಗಳ ಅಂಕುರಾರ್ಪಣವು ನಿನ್ನಿಂದ ಆಯಿತು. ನಿಮ್ಮಿಬ್ಬರ ವಿಷಯದಲ್ಲೂ ಎಷ್ಟು ಅಲ್ಪವಾದರೂ ಪರವಾಯಿಲ್ಲವೆಂದು ಭಾವಿಸಿ ನನ್ನ ಕೈಲಾದ ಸಹಾಯವನ್ನೆಲ್ಲಾ ಮಾಡಬೇಕೆಂದು ನಿಶ್ಚಯಿಸಿದೆ. ನನ್ನ ಅಂತರಂಗದಲ್ಲಿದ್ದ ಸಂಕಟವನ್ನು ಒಂದು ಮಾತಿನಿಂದಾಗಲಿ, ಒಂದು ನಿಟ್ಟುಸಿರಿನಿಂದಾಗಲಿ, ನಿನಗೆ ಯಾವ ಸುಳುವನ್ನೂ ಕೊಡದೆ ನನ್ನ ಕೆಲಸವನ್ನು ಮಾಡುತ್ತಿದ್ದೆ. ಇದಕ್ಕೆ ನನ್ನ ಮುಂದೆ ಇದ್ದ ದೃಷ್ಟಾಂತ ನೀನಲ್ಲದೆ ಮತ್ತಾರು, ಅತ್ತೆ? ಸಮಯವೊದಗಿದರೆ ನೀನು ನನಗೆ ಸಹಾಯ ಮಾಡುತ್ತಿದ್ದೆ – ಏಕೆ, ನೀನು ಆಗಲೇ ನನಗೆ ಎಷ್ಟು ಮಾಡಿದ್ದೀಯೆ? ಅತ್ತೆ, ನಿನ್ನ ದೃಷ್ಟಾಂತ ನನಗೆ ಮಾರ್ಗದರ್ಶಕಜ್ಯೋತಿಯಂತಿತ್ತು.

**ಲಿಯೊನಾರ್ಡಾ :** ಆಗಟ್!

**ಆಗಟ್ :** ಏಕೋ ಈ ವಿಷಯದಲ್ಲಿ ನೀನು ನನ್ನಷ್ಟು ಸಂತೋಷ

ದಿಂದ ಇರುವ ಹಾಗೆ ಕಾಣುವುದಿಲ್ಲ ಇವೆಲ್ಲಾ ಹೇಗೆ ನಡೆದುಬಂದವೆಂದು ನಿನಗೆ ಇನ್ನೂ ಗೊತ್ತಾಗಲಿಲ್ಲವೆ ?

**ಲಿಯೊನಾರ್ಡ :** ಗೊತ್ತಿರಬಹುದು – ಆದರೆ, ಕೊನೆಯಲ್ಲಿ ಇವುಗಳ ಪರಿಣಾಮ ?

**ಆಗಟ್:** ಏನು ಕೇಳುತ್ತಿ, ಅತ್ತೆ? ನಿನಗೆ ಗೊತ್ತಿರಬೇಕಲ್ಲ? ಇಲ್ಲವೆ? ನಿನಗೆ ತಿಳಿಯದೆ ಇರಬಹುದು ಹಾಗಾದರೆ! ನಿನಗೆ ಎಲ್ಲವನ್ನೂ ಸರಿಯಾಗಿ ತಿಳಿಯಪಡಿಸಬೇಕು. ಇಲ್ಲಧಿದ್ದರೆ ಬಿಷಪ್‌ರವರ ಮನೆಯಲ್ಲಿ ನಾನು ಬುದ್ಧಿ ಇಲ್ಲದವಳಂತೆ ಏಕೆ ನಡೆದುಕೊಂಡೆ ಎನ್ನುವುದು ನಿನಗೆ ಅರ್ಥ ವಾಗುವುದಿಲ್ಲ.

**ಲಿಯೊನಾರ್ಡ:** ಹೌದು, ಅರ್ಥವಾಗುವುದಿಲ್ಲ.

**ಆಗಟ್ :** ನಿನ್ನ ಸಂತೋಷಕ್ಕಾಗಿ ನಾನು ಎಲ್ಲಾ ವಿಧದ ಸ್ವಾರ್ಥ ತ್ಯಾಗಮಾಡಲು ಶ್ಲಾಘ್ಯವಾದ ನಿರ್ಧಾರಕ್ಕೆ ಬಂದಾಗ್ಗೆ ಹಾಗ್‌ಬಾರ್ಟ್ ನನ್ನಲ್ಲಿ ಯಾವ ವ್ಯತ್ಯಾಸವನ್ನೂ ಕಾಣಲಿಲ್ಲ, ಮತ್ತು ಕಿಂಚಿತ್ತಾದರೂ ನನ್ನನ್ನು ಅರ್ಥಮಾಡಿಕೊಳ್ಳಲಿಲ್ಲ. ಇದರಿಂದ ನನಗೆ ಬಹಳ ಕೋಪವುಂಟಾಯಿತು. ಎಂದಿನಂತೆ ಏನೋ ಕನಸುಕಾಣುತ್ತಿರುವನಂತೆ ನಡೆದುಕೊಂಡಿದ್ದ. ಹೀಗೆಯೆ ಒಂದಾದ ಮೇಲೆ ಇನ್ನೊಂದು ಸನ್ನಿವೇಶ. ಇತ್ಯಾದಿಯಾಗಿ ವಿಷಯಗಳು ಜರುಗುತ್ತಿದ್ದುದನ್ನು ನೋಡಿದರೆ ಆಶ್ಚರ್ಯವಾಗುತ್ತೆ. ಆಗ್ಗೆ ನನ್ನ ಮನಸ್ಸು ಅತಿಪ್ರಬಲವಾಗಿರಬೇಕು. ಹಾಗೆ ಪ್ರಬಲವಾಗುತ್ತೆಂದು ನನಗೆ ಅರಿವಿರಲಿಲ್ಲ. ಏಕೆಂದರೆ ಗುರುಗಳು ನಿನಗೆ ಅವಮಾನಮಾಡಲು ಉದ್ಯುಕ್ತರಾಗಿದ್ದಾಗ್ಗೆ —ಅದೂ ಕೂಡ ಹಿಂದಿನಿಂದ ಕತ್ತಿ ಇರಿತದ ಹಾಗೆ ಆಯಿತು — ಅದನ್ನು ತಡೆಯಲು ಹಾಗ್‌ಬಾರ್ಟ್ ಏನನ್ನೂ ಮಾಡಲಿಲ್ಲ. ಸುಮ್ಮನೆ ಕನಸು ಕಂಡವ ನಂತೆ ಇದ್ದದ್ದನ್ನು ನೋಡಿ ನನಗೆ ಹಿಡಿಯಲಾರದಷ್ಟು ಕೋಪ ಬಂದು ನನ್ನ ತಲೆ ಕೆಟ್ಟುಹೋಗಿತ್ತು. ಆ ಸಮಯದಲ್ಲಿ ನನ್ನ ಬುದ್ಧಿ ಹತೋಟಿ ಮೀರಿ, ನನ್ನ ಬಾಯಿಗೆ ಬಂದ್ದದ್ದನ್ನು ಹೇಳಿಬಿಟ್ಟೆ. ಎಲ್ಲಾ ಮರ್ಯಾದೆ ಗಳನ್ನೂ ಮೀರಿ ನಾನು ಹೇಗೆ ವರ್ತಿಸಿದೆನೆಂದು ನನಗೇ ಗೊತ್ತಿದೆ. ಆಗ ನಿನಗೆ ಬಹಳ ಆಗ್ರಹವುಂಟಾಯಿತು. ಆಮೇಲೆ ಇಬ್ಬರೂ ರಾಜಿಯಾದೆವು.

ಅನಂತರ ನಾನು ಈ ಊರನ್ನು ಬಿಟ್ಟು ಹೊರಟುಹೋದೆ. ಆಮೇಲೆ ಅಲ್ಲಿ — ?

**ಲಿಯೊನಾರ್ಡ್ಡಾ:** ಆಮೇಲೆ ಅಲ್ಲಿ — ?

**ಆಗಟ್:** ಅಲ್ಲಿ ಎಲ್ಲಾ ವಿಷಯಗಳನ್ನೂ ನಿಧಾನವಾಗಿ ಯೋಚಿಸಿದೆ. ನಾವಿಬ್ಬರೂ ಮನೆಗೆ ಹಿಂತಿರುಗುತ್ತಿರುವಾಗ ದಾರಿಯಲ್ಲಿ ಅವನ ವಿಷಯ ವಾಗಿ ನೀನು ಹೇಳಿದ ಸವಿಮಾತುಗಳೆಲ್ಲಾ ಪುನಃಪುನಃ ನನ್ನ ಮನಸ್ಸಿಗೆ ಬಂದವು. ನಿನ್ನ ತಾತ್ಪರ್ಯ ನನ್ನ ಮನಸ್ಸಿಗೆ ಅಂಟಿತು. ನಿನ್ನದು ನಿಜ ಸ್ವಭಾವ – ನೀನು ಯಾವಾಗಲೂ ಹಾಗೆಯೇ ಇರುತ್ತೀಯೆ | — ಮೃದು ಸ್ವಭಾವ, ಉದಾರ ಸ್ವಭಾವ! ಬೆಟ್ಟದ ಮೇಲೂ ಬಹಳ ಸುಂದರವಾಗಿತ್ತು. ಅಲ್ಲಿನ ಹವಾಗುಣ, ಸ್ವಚ್ಛವಾದ ಬೆಳಕು, ಹಿಂದೆ ಮುಂದೆ ಮೇಲೆ ಕೆಳಗೆ ಎಲ್ಲಿ ನೋಡಿದರೂ ವಿಶಾಲಪ್ರದೇಶ – ಎಲ್ಲವೂ ಅದ್ಭುತವಾಗಿತ್ತು. ಗಾಳಿ ಮಳೆಗಳ ಬಿರುಸಿನಿಂದ ಮರೆಯಾದ ಸರೋವರ ಸದಾಕಾಲದಲ್ಲೂ ಶಾಂತವಾಗಿರು ತ್ತಿತ್ತು. ಅದರಲ್ಲೂ ಸಂಜೆಯ ವೇಳೆಯಲ್ಲಿ! ವಿಶ್ರಾಂತಿಗೆ ಬಹಳ ಅನುಕೂಲ ವಾದ ನಿಶ್ಶಬ್ದವಾದ ಸ್ಥಳ. ಕೊನೆಗೆ ವಾಸಿಯಾಯಿತು, ಹುಣ್ಣು ವಾಗಿ ವಾಸಿಯಾಗುವಂತೆ!

**ಲಿಯೊನಾರ್ಡ್ಡಾ:** ಏನು ವಾಸಿಯಾಯಿತು?

**ಆಗಟ್:** ಏನು ವಾಸಿಯಾಯಿತೆ? ನನ್ನ ಹೃದಯವೇದನೆ! ಇದ್ದ ತೊಂದರೆಗಳೆಲ್ಲಾ ಮಾಯವಾದವು. ಈಗ ಚೆನ್ನಾಗಿ ನನಗೆ ಮನದಟ್ಟಿದೆ— ಹಾಗ್‌ಬಾರ್ಟ್‌ನ ಸ್ವಭಾವ! ನೀನು ಹೇಳಿದ ಹಾಗೆ ಅವನದು ಉದಾತ ಸ್ವಭಾವ, ರುಜುಸ್ವಭಾವ! ನಿನ್ನ ಸ್ವಭಾವವೂ ಹಾಗೆಯೇ, ಅತ್ತೆ, ಒಂದು ಕ್ಷಣವಾದರೂ ನನ್ನ ಮನಸ್ಸನ್ನು ನೀವು ನೋಯಿಸುವವಳಲ್ಲ; ಅರಿವಿಲ್ಲದೆ ಕೂಡ ನನ್ನನ್ನು ನೀನು ನೋಯಿಸುವುದಿಲ್ಲ. ಬೆಟ್ಟದ ಮೇಲೆ ಸಮಚಿತ್ತ ಳಾಗಿ ವಿಶ್ರಾಂತಿ ಪಡೆಯುತ್ತಾ - ಯೋಚನೆಯಲ್ಲಿ ಮಗ್ನಳಾಗಿದ್ದ ನಾನು ಮನಸ್ಸಿಗೆ ಉಂಟಾದ ಹಿತ – ನೆಮ್ಮದಿ – ತೃಪ್ತಿಗಳಿಂದ ನಿದ್ದೆಹೋಗುತ್ತಿದ್ದೆ. ಆದರೂ ಅವನ ಮೇಲಿನ ಪ್ರೇಮವೆಷ್ಟೆಂದು ಹೇಳಲಿ! ಆ ಸಮಯಕ್ಕೆ ಅಜ್ಜಿ ಬರೆದ ಕಾಗದ ಬಂತು!

(ಹ್ಯಾನ್ಸ್ ಒಳಗೆ ಬರುವನು – ಮೊದಲು ಆಗಟ್‌ಅನ್ನು ನೋಡುವುದಿಲ್ಲ.)

**ಹ್ಯಾನ್ಸ್:** ಹಾಗಾದರೆ ಮಿಸ್ ಆಗಟ್‌ಅನ್ನು ಕರೆತರಲು-ಇದೇನಿದು? ಇಲ್ಲಿಯೇ ಇದ್ದಾಳೆ!

**ಆಗಟ್ :** (ಎದ್ದುನಿಂತು) ನಾನು ಬೆಚ್ಚಿಬಿದ್ದೆ, ಹ್ಯಾನ್ಸ್!

**ಹ್ಯಾನ್ಸ್ :** ಸ್ವಾಗತ ನಿನಗೆ.

**ಆಗಟ್ :** ತುಂಬಾ ವಂದನೆಗಳು, ಹ್ಯಾನ್ಸ್.

**ಹ್ಯಾನ್ಸ್ :** ನನಗೆ ಒಂದು ಪ್ರಯಾಣ ಉಳಯಿತೆಂದು ಕಾಣುತ್ತೆ, ಮಿಸ್ ಆಗಟ್ ?

**ಆಗಟ್ :** ಆದರೆ ಯಾರಾದರೂ ಹೋಗಿ ನನ್ನ ಸಾಮಾನುಗಳನ್ನು ತರಬೇಕು.

**ಹ್ಯಾನ್ಸ್:** ಸರಿ ತಾನೆ – ಏನಿದು, ಅಮ್ಮಾವರು ಸ್ವಸ್ಥವಾಗಿಲ್ಲವೆ?

**ಆಗಟ್ :** ಅತ್ತೆ, ಅಯ್ಯೋ ದೇವರೆ! ಏನಾಗುತ್ತೆ ಅತ್ತೆ?

**ಹ್ಯಾನ್ಸ್ :** ಈಚೆಗೆ ಅಮ್ಮಾವರ ದೇಹಸ್ಥಿತಿ ಸರಿಯಾಗಿರುವ ಹಾಗೆ ಕಾಣುತ್ತಿಲ್ಲ!

**ಆಗಟ್ :** ಅತ್ತೆಗೆ ಸ್ವಸ್ಥವಾಗಿಲ್ಲವೆ? ಅತ್ತೆ, ನಾನೇನು ಮಾಡಲಿ? ನಿನಗೆ ಏನಾದರೂ—ಅತ್ತೆ – ಅತ್ತೆ !

**ಹ್ಯಾನ್ಸ್ :** ಯಾರನ್ನಾದರೂ ಕರೆದುಕೊಂಡುಬರಲೆ—?

**ಲಿಯೊನಾರ್ಡಾ:** ಬೇಡ, ಬೇಡ. ಆಗಟ್, ನೀನು — ಅಯ್ಯೋ ಏನು ಹೇಳಲಿ? ಅಯ್ಯೋ ದೇವರೆ! ಆಗಟ್, ನೀನು ಒಳಗೆ ಓಡಿಹೋಗಿ— ತೆಗೆದುಕೊಂಡು ಬರುತ್ತೀಯಾ?

**ಆಗಟ್ :** ಏನು ? ನಿನ್ನ ಔಷಧಿ ಸೀಸೆಯನ್ನೆ ?

**ಲಿಯೊನಾರ್ಡಾ:** ಹೌದು. (ಆಗಟ್ ಒಳಗೆ ಓಡುವಳು.) ಹ್ಯಾನ್ಸ್, ನೀನು ಎಷ್ಟು ಬೇಗ ಆದರೆ ಅಷ್ಟು ಬೇಗ ಹೋಗಿ ಜನರಲ್‌ರವರನ್ನು ಕರೆದುಕೊಂಡು ಬಾ, ತಡಮಾಡಬೇಡ.

**ಹ್ಯಾನ್ಸ್ :** ಆಗಲಿ-ಅಮ್ಮ.

**ಲಿಯೊನಾರ್ಡಾ:** ಹ್ಯಾನ್ಸ್ !

**ಹ್ಯಾನ್ಸ್ :** ಏನು, ತಾಯಿ ?

**ಲಿಯೊನಾರ್ಡಾ:** ಹ್ಯಾನ್ಸ್! ನೀನು ಕುದುರೆಯ ಮೇಲೆ ಹೋಗು.

ಮನೆಯಲ್ಲಿ ಇರದಿದ್ದರೆ ಜನರಲ್‌ರವರನ್ನು ಬೇರೆ ಕಡೆ ಹುಡುಕಿ ಕರೆದುಕೊಂಡು ಬರಬೇಕಾಗಬಹುದು.

**ಹ್ಯಾನ್ಸ್ :** ಅಮ್ಮ, ಹಾಗೇ ಆಗಲಿ. (ಹೊರಗೆ ಹೋಗುವನು.)

**ಆಗಟ್ :** (ವಾಪಸ್ಸು ಬಂದು) ಇಗೊ ಇಲ್ಲಿದೆ, ಅತ್ತೆ !

**ಲಿಯೊನಾರ್ಡಾ :** ವಂದನೆಗಳು ಆಗಟ್ - ಔಷಧಿ ಈಗ ಬೇಡ !

**ಆಗಟ್ :** ಏನಾಗುತ್ತಿತ್ತು, ಅತ್ತೆ ?

**ಲಿಯೊನಾರ್ಡಾ :** ಮಗು, ಅದೊಂದು ಏನೋ — ಅದು ಸಂಕ್ರಮಣದ ಸಮಯದಲ್ಲಿ ಕೆಲವರಿಗೆ ಆಗುವ ಬಾಧೆ — ಅಷ್ಟೆ !

(ತೆರೆ ಬೀಳುವುದು.)

(ಈ ಅಂಕಕ್ಕೂ ಮುಂದಿನ ಅಂಕಕ್ಕೂ ನಡುವಿನ ಕಾಲಾವಕಾಶ ತುಂಬಾ ಹ್ರಸ್ವವಾಗಿರಬೇಕು.)

# ನಾಲ್ಕನೆಯ ಅಂಕ

[ದೃಶ್ಯ—ಬಿಷಪ್‌ನ ಮನೆಯಲ್ಲಿ ಒಂದು ಚಿಕ್ಕಮನೆ. ರಾತ್ರಿಯಾಗಿದೆ. ದೀಪಗಳನ್ನು ಹಚ್ಚಿದೆ. ಲಿಯೊನಾರ್ಡ್ಡಾ ಜೊತೆಯಲ್ಲಿ ಬಿಷಪ್ ಪ್ರವೇಶಿಸುವನು. ಲಿಯೊನಾರ್ಡ್ಡಾ ಪ್ರಯಾಣ ಸನ್ನದ್ಧಳಾಗಿ ತಕ್ಕ ಉಡುಪನ್ನು ಧರಿಸಿ, ಒಂದು ತೋಳಿನ ಮೇಲೆ ಶಾಲನ್ನೂ ಇನ್ನೊಂದು ಕೈಯಲ್ಲಿ ಒಂದು ಪೆಟ್ಟಿಗೆಯನ್ನೂ ಹಿಡಿದುಕೊಂಡಿರುವಳು. ಅವಳ ಕೈಲಿರುವ ಭಾರವನ್ನು ಇಳಿಸಲು ಬಿಷಪ್ ಪ್ರಯತ್ನಿಸುವನು. ಲಿಯೊನಾರ್ಡ್ಡಾ ತಾನಾಗಿಯೇ ಎರಡನ್ನೂ ಕೆಳಗೆ ಇಡುವಳು.]

**ಲಿಯೊನಾರ್ಡ್ಡಾ:** ಇಷ್ಟು ಹೊತ್ತಾದ ಮೇಲೆ ಗುರುಗಳಿಗೆ ತೊಂದರೆ ಕೊಟ್ಟದ್ದಕ್ಕೆ ಕ್ಷಮಿಸಬೇಕು. ಆದಕ್ಕೆ ಕಾರಣ ನನ್ನ ಕೈಮೀರಿದ್ದು. ನಿಮ್ಮ ಸೋದರಅಳಿಯ ಮನೆಯಲ್ಲಿದ್ದಾನೆಯೆ?

**ಬಿಷಪ್ :** ಇಲ್ಲ. ಅವನ ಪರೀಕ್ಷಣೆಯಲ್ಲೆ ಇದ್ದೇನೆ. ಮಧ್ಯಾಹ್ನ ಎರಡಾವರ್ತಿ ನನ್ನನ್ನು ನೋಡಲು ಬಂದಿದ್ದನಂತೆ— ನಾನು ಮನೆಯಲ್ಲಿರಲಿಲ್ಲ.

**ಲಿಯೊನಾರ್ಡ್ಡಾ:** ಹಾಗಾದರೆ ನಾನು ಮಾಡಬೇಕೆಂದಿರುವ ಕೆಲಸವನ್ನು ಅವನು ಬರುವುವಕ್ಕೆ ಮುಂಚಿತವಾಗಿಯೇ ಮುಗಿಸುತ್ತೇನೆ.

**ಬಿಷಪ್ :** ಅವನು ಬಂದೊಡನೆ ನಮಗೆ ತಿಳಿಸಬೇಕೆಂದು ಏರ್ಪಾಟು ಮಾಡಲೆ?

**ಲಿಯೊನಾರ್ಡ್ಡಾ:** ದಯವಿಟ್ಟು ಹಾಗೆ ಮಾಡಬೇಕು.

**ಬಿಷಪ್ :** (ಗಂಟೆಯನ್ನು ಶಬ್ದ ಮಾಡುತ್ತಾ) ಅವನು ಊರಿಗೆ ಬಂದನೆಂದು ಅಜ್ಜಿ ಹೇಳಿದಳು.

**ಲಿಯೊನಾರ್ಡ್ಡಾ:** ಹೌದು.

(ಹೆಣ್ಣಾಳು ಪ್ರವೇಶಿಸುವಳು.)

**ಬಿಷಪ್ :** ಹಾಗ್‌ಬಾರ್ಟ್ಸ್ ಮನೆಗೆ ಬಂದ ಒಡನೆ ನಮಗೆ ತಿಳಿಸು. (ಹೆಣ್ಣಾಳು ಹೋಗುವಳು.)

**ಲಿಯೊನಾರ್ಡಾ:** ಅಜ್ಜಿಯೊಡನೆ ಮಾತಾಡಿದನೆ ಅವನು ?

**ಬಿಷಪ್ :** ಹೌದು.

**ಲಿಯೊನಾರ್ಡಾ:** ನೋಡಿದನಂತರ—(ಹಾಗೆಯೆ ತಡೆದುಕೊಳ್ಳುವಳು.)

**ಬಿಷಪ್ :** ನಿನ್ನನ್ನು ನೋಡಿದನಂತರ.

**ಲಿಯೊನಾರ್ಡಾ:** ಅಜ್ಜಿಗೆ ಏನಾದರೂ ಹೇಳಿದನೆ ?

**ಬಿಷಪ್ :** ಅವನ ಮನಸ್ಸು ಬಹಳ ಕಳವಳಗೊಂಡಿತ್ತು ಎಂದು ಕಾಣುತ್ತೆ. ಅಜ್ಜಿಗೆ ನಾನು ಮತ್ತಾವ ಪ್ರಶ್ನೆಗಳನ್ನೂ ಹಾಕಲಿಲ್ಲ. ಅವರಿಬ್ಬರ ಮಧ್ಯೆ ಏನು ಮಾತುಕತೆಗಳು ನಡೆದಿರಬಹುದೆಂದು ನಾನು ಊಹಿಸಬಲ್ಲೆ. ನಿನಗೆ ಎಲ್ಲಾ ಹೇಳಿದಾನೆಯೆ ?

**ಲಿಯೊನಾರ್ಡಾ:** ಹೇಳಿದ್ದಾನೆ.

**ಬಿಷಪ್ :** ಆಮೇಲೆ ನೀನು, ಮಿಸಸ್ ಫಾಲ್ಕ್—?

**ಲಿಯೊನಾರ್ಡಾ:** ನಾನೇ—ನಾನು ನಿಮ್ಮಲ್ಲಿಗೆ ಬಂದಿದ್ದೇನೆ.

**ಬಿಷಪ್ :** ನೋಡಿದರೆ ನೀನು ಈಗ ಪ್ರಯಾಣೋನ್ಮುಖಳಾಗಿರುವಂತಿದೆ.

**ಲಿಯೊನಾರ್ಡಾ:** ಹೌದು. ಒಂದು ಪ್ರಯಾಣವನ್ನಿಟ್ಟುಕೊಂಡಿದ್ದೇನೆ. ಅಂತ್ಯದಲ್ಲಿ ಎಲ್ಲವೂ ಗುರುಗಳು ಬಯಸಿದಂತೆಯೇ ಆಗಿವೆ !

**ಬಿಷಪ್ :** ಅವನಿಗೆ ತಿಳಿಯದ ಹಾಗೆ ?

**ಲಿಯೊನಾರ್ಡಾ :** ನನ್ನ ಜೊತೆಯಲ್ಲಿ ಪ್ರಯಾಣ ಮಾಡುವ ಆಸಾಮಿಯನ್ನು ಬಿಟ್ಟು ಮತ್ತೆ ಯಾರಿಗೂ ತಿಳಿಯದ ಹಾಗೆ. ಇಂಗ್ಲೆಂಡಿಗೆ ಈ ರಾತ್ರಿ ದೋಣಿಯಲ್ಲಿ ನಾನು ಪ್ರಯಾಣ ಮಾಡುತ್ತೇನೆ.

**ಬಿಷಪ್ :** (ಗಡಿಯಾರವನ್ನು ತೆಗೆದುನೋಡಿ) ಹಾಗಾದರೆ ಹೊತ್ತಾಯಿತು !

**ಲಿಯೊನಾರ್ಡಾ:** ಹೆಚ್ಚೇನೂ ಕೆಲಸವಿಲ್ಲ. ನನ್ನ ಆಸ್ತಿಗಳಿಗೆ ಸಂಬಂಧಪಟ್ಟ ಈ ನ್ಯಾಸಪತ್ರವನ್ನು ನಿಮ್ಮ ವಶಕ್ಕೆ ಒಪ್ಪಿಸಿ ಹೋಗೋಣವೆಂದು ಬಂದೆ.

**ಬಿಷಪ್ :** ನಿನ್ನ ಸೋದರಸೊಸೆ ಆಗಟ್‌ನ ಹೆಸರಿನಲ್ಲಿ—?

**ಲಿಯೊನಾರ್ಡ್:** ಹೌದು. ಅವಳ ಹೆಸರಿನಲ್ಲಿ. ನನ್ನ ಆಸ್ತಿಯನ್ನೆಲ್ಲಾ ಆಗಟ್‌ಗೆ ಬಿಟ್ಟಿದ್ದೇನೆ.

**ಬಿಷಪ್ :** ಹಾಗಾದರೆ ಕೆಲವು ದಿನಗಳ ಹಿಂದೆ ನೀನು ಹೇಳಿದ್ದೆಯಲ್ಲ– ?

**ಲಿಯೊನಾರ್ಡ್:** ಸದ್ಯಕ್ಕೆ ಪ್ರಯಾಣದ ಖರ್ಚಿಗೆ ಸಾಕಾದಷ್ಟು ಹಣ ಇದೆ. ಆಮೇಲೆ ನನಗೆ ಏನೂ ಬೇಡ. ದೇವರು ಸರಿಯಾದ ದಾರಿ ತೋರಿಸಿ ನೋಡಿಕೊಳ್ಳುತ್ತಾನೆ.

**ಬಿಷಪ್ :** ಆಗಟ್‌ನ ವಿಷಯ. ಅವಳು ವಾಪಸ್ಸು ಬರುವ ತನಕ ನೀನು ಕಾಯುವುದಿಲ್ಲವೆ ?

**ಲಿಯೊನಾರ್ಡ್:** ಈವೊತ್ತು ಊರಿಗೆ ವಾಪಸ್ಸು ಬಂದಳು. ಈಗ ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಾಳೆ. ಕೂಡಲೇ ಅವಳನ್ನು ಇಲ್ಲಿಗೆ ಕರೆದುಕೊಂಡು ಬರಲು ನನ್ನ ಗಾಡಿಯನ್ನು ಅವಳಿಗೆ ಕಳುಹಿಸಿದ್ದೇನೆ. ನನ್ನದೊಂದು ಪ್ರಾರ್ಥನೆಯನ್ನು ಗುರುಗಳು ನಡಸಿಕೊಡಬೇಕು. ಅವಳು ಇಲ್ಲಿಗೆ ಬಂದಾಗ್ಗೆ ಗುರುಗಳು ಅವಳನ್ನು ಸ್ವಾಗತಿಸಿ ನೋಡಿಕೊಳ್ಳಬೇಕು. ಅವಳನ್ನು ಸಮಾಧಾನಪಡಿಸಬೇಕು. ಇದನ್ನು ಕೇಳಿಕೊಳ್ಳುವುದಕ್ಕೆ ನನಗೆ ಇನ್ನಾರೂ ಇಲ್ಲ–ತಾವೇ ಗತಿ!

**ಬಿಷಪ್ :** ಅಗತ್ಯವಾಗಿ ನಡಸಿಕೊಡುತ್ತೇನೆ, ಮಿಸಸ್ ಫಾಲ್ಕ್. ಹೀಗೆ ಮಾಡುವುದು ನಿನಗೆ ಬಹಳ ಕಷ್ಟಸಾಧ್ಯವಾಗಿರಬೇಕು.

**ಲಿಯೊನಾರ್ಡ್:** ಅವರಿಬ್ಬರನ್ನೂ ಒಟ್ಟುಗೂಡಿಸಲು ಗುರುಗಳು ಪ್ರಯತ್ನಿಸುವುದಕ್ಕಾಗುತ್ತದೆಯೇ?

**ಬಿಷಪ್ :** ಅವರಿಬ್ಬರಿಗೂ ಅನ್ಯೋನ್ಯ ಪ್ರೀತಿಯಿಲ್ಲವಲ್ಲ!

**ಲಿಯೊನಾರ್ಡ್:** ಆಗಟ್ ಅವನನ್ನು ಪ್ರೀತಿಸುತ್ತಿದ್ದಾಳೆ. ಆಮೇಲೆ– ಅವರಿಬ್ಬರೂ ನನ್ನನ್ನು ಪ್ರೀತಿಸುತ್ತಾರೆ. ನಾನು ಹೊರಟುಹೋದ ಮೇಲೆ ಅವರಿಬ್ಬರೂ ಒಟ್ಟುಗೂಡಿರಬೇಕೆಂಬುವುದು ನನ್ನ ಇಚ್ಛೆಯೆಂದು ಅವರಿಗೆ ತಿಳಿದರೆ ನನ್ನ ಮೇಲಿನ ಪ್ರೀತಿಯಿಂದ ಅವರಿಬ್ಬರೂ ಪುನಃ ಅನ್ಯೋನ್ಯವಾಗಿ ಸೇರಿಕೊಂಡಿರಬಹುದೆಂಬ ಆಸೆ ನನಗಿದೆ. ಹಾಗೆ

ಆಗಬಹುದೆಂದು ನನಗೆ ನಂಬಿಕೆಯಿದೆ- ಅಲ್ಲದೆ ಇಬ್ಬರೂ ಇನ್ನೂ ಚಿಕ್ಕ ವಯಸ್ಸಿನವರು.

**ಬಿಷಪ್** : ನನ್ನ ಕೈಲಾದ್ದನ್ನೆಲ್ಲಾ ಮಾಡುತ್ತೇನೆ.

**ಲಿಯೊನಾರ್ಡ್ಡಾ**: ಧೈರ್ಯಮಾಡಿ ಕೇಳಬಹುದಾದರೆ ಮತ್ತೊಂದು ಪ್ರಾರ್ಥನೆ. ಅಜ್ಜಿಯು ಹಳ್ಳಿಯಲ್ಲಿ ಆಗಟ್‌ನ ಜೊತೆಯಲ್ಲಿ ವಾಸ ಮಾಡಿಕೊಂಡಿರಲು ಗುರುಗಳು ಅನುಮತಿ ಕೊಡಬೇಕು. ಇಲ್ಲವೆ ಆಗಟ್ ಅಜ್ಜಿಯ ಜೊತೆಯಲ್ಲಿ ಇಲ್ಲೇ ಇರಲಿ. ಅವರಿಗೆ ಹೇಗೆ ಅನುಕೂಲವೊ ಹಾಗೆ ಮಾಡಲಿ. ಅಜ್ಜಿಯನ್ನು ನೋಡಿಕೊಳ್ಳುವ ಹವ್ಯಾಸವನ್ನು ಹತ್ತಿಸಿಕೊಂಡಿದ್ದರೆ ಆಗಟ್‌ಗೆ ಕಾಲ ಕಳೆಯುವುದು ಸುಲಭ. ಮತ್ತು ಅಜ್ಜಿಯ ಮೇಲೆ ಆಗಟ್ ಬಹಳ ಪ್ರೀತಿಯಿಟ್ಟಿದ್ದಾಳೆ.

**ಬಿಷಪ್** : ಆಗಟ್‌ನ ವಿಷಯದಲ್ಲಿ ಅಜ್ಜಿಯೂ ಹಾಗೆಯೆ!

**ಲಿಯೊನಾರ್ಡ್ಡಾ**: ಅಜ್ಜಿ ಇದ್ದ ಕಡೆ ಹಾಗ್‌ಬಾರ್ಟ್ ಕೂಡ ಇರುತ್ತಾನೆ. ಬಹುಶಃ ಅಜ್ಜಿಯೂ ಕೂಡ ಅವರಿಬ್ಬರಿಗೂ ಸಹಾಯ ಮಾಡಬಹುದು!

**ಬಿಷಪ್** : ನಿನ್ನ ಯೋಚನೆಗಳೆಲ್ಲಾ ಬಹಳ ಉತ್ಕೃಷ್ಟವಾದುವು! ಪ್ರತಿಯೊಂದನ್ನೂ ಇಷ್ಟು ಕೂಲಂಕಷವಾಗಿ ನೀನು ಯೋಚಿಸಿ ನಿರ್ಧಾರಕ್ಕೆ ಬರಲು ನಿನ್ನ ಮನಸ್ಸನ್ನು ಗಟ್ಟಿಮಾಡಿರುವುದನ್ನು ನೋಡಿದರೆ ಅತ್ಯಾಶ್ಚರ್ಯವಾಗುತ್ತೆ!

**ಲಿಯೊನಾರ್ಡ್ಡಾ**: ಅಜ್ಜಿ ಎಚ್ಚರವಾಗಿದ್ದಾಳೆಯೆ?

**ಬಿಷಪ್** : ಎಚ್ಚರವಾಗಿದ್ದಾಳೆ. ಇದೇ ತಾನೆ ಅವಳ ಚಿಕ್ಕಮನೆಯಿಂದ ಬಂದೆ. ಹಾಗ್‌ಬಾರ್ಟ್ ಅವಳ ಮನಸ್ಸನ್ನು ಗಲಿಬಿಲಿ ಮಾಡಿಬಿಟ್ಟಿದ್ದಾನೆ. ಆವಳಿಗೆ ಮನಃಕ್ಷೋಭೆಗಳನ್ನು ತಡೆದುಕೊಳ್ಳಲು ಆಗುವುದಿಲ್ಲ.

**ಲಿಯೊನಾರ್ಡ್ಡಾ**: ಹಾಗಾದರೆ ನಾನು "ಹೋಗಿಬರುತ್ತೇನೆ" ಎಂದು ಹೇಳಲು ಅವಳನ್ನು ನೋಡಲು ಹೋಗುವುದಿಲ್ಲ. ನೋಡಿ ಹೋಗೋಣವೆಂದಿದ್ದೆ.

**ಬಿಷಪ್** : ನಾನು ಅದಕ್ಕೆ ಸಮ್ಮತಿ ಕೊಡಲಾರೆ.

**ಲಿಯೊನಾರ್ಡಾ:** "ನಾನು ಹೋಗಿಬರುತ್ತೇನೆ" ಎಂದು ಹೇಳಿದೆ ಎಂದು ಅವಳಿಗೆ ತಿಳಿಸಿ ನನ್ನ ಕೃತಜ್ಞತೆಯನ್ನು ಹೇಳಬೇಕು.

**ಬಿಷಪ್:** ಆಗಲಿ. ಮಾಡುತ್ತೇನೆ.

**ಲಿಯೊನಾರ್ಡಾ:** ಅಜ್ಜಿಗೆ ಹೇಳಬೇಕು — ಅವರಿಬ್ಬರಿಗೂ ಸಹಾಯಕಳಾಗಿ —

**ಬಿಷಪ್:** ನನ್ನ ಕೈಲಾದ್ದು ಎಲ್ಲವನ್ನೂ ಹೇಳುತ್ತೇನೆ.

**ಲಿಯೊನಾರ್ಡಾ:** ನನ್ನಿಂದ ಇಲ್ಲಿ ಉಂಟಾದ ಗೊಂದಲಕ್ಕೆ ನಿಮ್ಮ ಕ್ಷಮಾಪಣೆ ಕೇಳಿಕೊಳ್ಳುತ್ತೇನೆ. ಅದು ನನ್ನ ಉದ್ದೇಶವಾಗಿರಲಿಲ್ಲ.

**ಬಿಷಪ್:** ನಿನ್ನ ಸ್ವಭಾವವನ್ನು ಮುಂಚಿತವಾಗಿ ನಾನು ತಿಳಿದುಕೊಳ್ಳಲಿಲ್ಲವೆಂದು ವ್ಯಸನವಾಗುತ್ತೆ. ತಿಳಿದುಕೊಂಡಿದ್ದರೆ ವಿಷಯಗಳು ಬೇರೆಯಾಗಿರಬಹುದಾಗಿತ್ತು.

**ಲಿಯೊನಾರ್ಡಾ:** ಆ ಪ್ರಸ್ತಾಪವೇ ಈಗ ಬೇಡ.

(ಹೆಣ್ಣಾಳು ಪ್ರವೇಶಿಸುವಳು.)

**ಹೆಣ್ಣಾಳು:** (ಲಿಯೊನಾರ್ಡಾ ಕುರಿತು) ಅಮ್ಮ, ನಿಮಗೆ ಈ ಕಾರ್ಡನ್ನು ಕೊಡಹೇಳಿದರು.

**ಲಿಯೊನಾರ್ಡಾ:** ವಂದನೆಗಳು. ಜನರಲ್ ರೋಸೆನ್ ಹಜಾರದಲ್ಲಿ ಇದಾರೆಯೆ?

**ಹೆಣ್ಣಾಳು:** ಹೌದು.

**ಬಿಷಪ್:** ಜನರಲ್ ರೋಸೆನ್ ಇಲ್ಲಿ ಬಂದಿದಾನೆಯೆ?

**ಲಿಯೊನಾರ್ಡಾ:** ದೋಣಿ ನಿಷಾನೆ ಆದ ಒಡನೆ ನನ್ನನ್ನು ಕರೆದೊಯ್ಯಲು ಆತನನ್ನು ನಾನು ಇಲ್ಲಿಗೆ ಬರಹೇಳಿದ್ದೆ —

**ಬಿಷಪ್:** ಜನರಲ್‌ಅನ್ನು ಒಳಗೆ ದಯಮಾಡಿಸಬೇಕೆಂದು ಹೇಳು. (ಹೆಣ್ಣಾಳು ಹೋಗುವಳು) ಹಾಗಾದರೆ ನಿನ್ನ ಕೂಡ ಜನರಲ್ ರೋಸೆನ್ — (ತಡೆದುಕೊಳ್ಳುವನು.)

**ಲಿಯೊನಾರ್ಡಾ:** (ತನ್ನ ಕೈಚೀಲದಲ್ಲಿ ಹುಡುಕುತ್ತಾ) ನನ್ನ ಜೊತೆಯಲ್ಲಿ ಬರುವವನು—ಅವನು ನನ್ನ ಗಂಡ!

**ಬಿಷಪ್** : ನೀನು ಬೇರೆಯಾಗಿ ಬಿಟ್ಟಿದ್ದ ಗಂಡನೆ?

**ಲಿಯೊನಾರ್ಡಾ**: ಹೌದು.

**ಬಿಷಪ್** : ಮಿಸಸ್ ಫಾಲ್ಕ್, ನಾನು ನಿನಗೊಂದು ದೊಡ್ಡ ಅನ್ಯಾಯ ವನ್ನು ಮಾಡಿದ್ದೇನೆ!

**ಲಿಯೊನಾರ್ಡಾ**: ಹೌದು, ಮಾಡಿದ್ದೀರಿ. (ಜನರಲ್ ರೋಸೆನ್ ಪೋಷಾಕು ಧರಿಸಿ ಠಾಕುಠೀಕುಗಳಿಂದ ನೀಟಾಗಿ ಕಾಣುವನು. ಪ್ರವೇಶಿಸಿ—)

**ಜನರಲ್ ರೋಸೆನ್** : ಗುರುಗಳು ಕ್ಷಮಿಸಬೇಕು. ಆದರೆ ಕಾಲ ಮಿಂಚುತ್ತಾ ಬಂತು. ಮಿಸಸ್ ಫಾಲ್ಕ್, ಇದು ನಿನ್ನದೆ? (ಅವಳಿಗೆ ಒಂದು ಕಾಗದ ಕೊಡುವನು.)

**ಲಿಯೊನಾರ್ಡಾ**: ಹೌದು. ಆಗಟ್ ಬಂದ ಒಡನೆ ಗುರುಗಳು ಅವಳಿಗೆ ಈ ಕಾಗದವನ್ನು ಕೊಡಬೇಕೆಂದು ಪ್ರಾರ್ಥಿಸುತ್ತೇನೆ. ಮತ್ತು ಕೈಲಾದ ಸಹಾಯ ಮಾಡಬೇಕು ಅವಳಿಗೆ.

**ಬಿಷಪ್** : ಮಿಸಸ್ ಫಾಲ್ಕ್, ಹಾಗೇ ಮಾಡುತ್ತೇನೆ. ಭಗವಂತನು ನಿನ್ನನ್ನು ಕಾಪಾಡಲಿ.

(ಹೆಣ್ಣಾಳು ಪ್ರವೇಶಿಸುವಳು.)

**ಹೆಣ್ಣಾಳು** : ಹಾಗ್‌ಬಾರ್ಸ್ಟ್ ಇದೇ ತಾನೆ ಬಂದರು.

**ಲಿಯೊನಾರ್ಡಾ**: ಹೋಗಿಬರುವೆ — ಹೋಗಿಬರುವೆನೆಂದು ತಿಳಿಸ ಬೇಕು!

**ಬಿಷಪ್** : (ಅವಳ ಕೈಕುಲುಕಿ) ನಮ್ಮೆಲ್ಲರಿಗೂ ಅಸಾಧ್ಯವಾದದ್ದನ್ನು ನೀನು ಮಾಡಿದ್ದೀಯೆ!

**ಲಿಯೊನಾರ್ಡಾ**: ಅದು ನಮ್ಮ ನಿಜವಾದ ಪ್ರೀತಿಯ ಆಧಾರದ ಮೇಲೆ ನಿಂತಿರುತ್ತೆ. ನಿಮಗೆ ನಾನು ಕೃತಜ್ಞಳಾಗಿದ್ದೇನೆ. ಹೋಗಿ ಬರುತ್ತೇನೆ.

**ಬಿಷಪ್** : ಹೋಗಿ ಬಾ. (ಜನರಲ್ ರೋಸೆನ್ ಕೈನೀಡುವನು. ಲಿಯೊ ನಾರ್ಡಾ ಅವನ ಕೈಹಿಡಿದುಕೊಂಡು ಹೋಗುವಳು. ಹಿಂದಿನ ಬಾಗಿಲ ತಸಕ ಬಿಷಪ್ ಬೀಳ್ಕೊಳ್ಳಲು ಹೋಗುವನು. ಬಲಗಡೆಯಿಂದ ಹಾಗ್‌ಬಾರ್ಸ್ಟ್ ಪ್ರವೇಶಿಸುವನು. ಸುತ್ತ

ಮುತ್ತ ನೋಡಿ ಆಶ್ಚರ್ಯಪಟ್ಟು, ಹಿಂಬಾಗಿಲ ಕಡೆ ಹೋಗುವನು. ಬಾಗಿಲ ಬಳಿ ಬಿಷಪ್‌ರನ್ನು ಸಂಧಿಸುವನು.)

**ಬಿಷಪ್ :** ಯಾರು? ನೀನೆ? (ಮಾತನಾಡದೆ ಮುಂದೆ ಬರುವರು.)

**ಹಾಗ್‌ಬಾರ್ಡ್ :** (ಭಾವೋದ್ರೇಕಗಳಿಂದ ಕೆರಳಿರುವನು. ಮೆತ್ತಗೆ ಮಾತಾಡುತ್ತಾನೆ.) ನಿನ್ನ ಮುಖದಿಂದಲೂ ನಿನ್ನ ಧ್ವನಿಯಿಂದಲೂ ನಿನಗೆ ಎಲ್ಲಾ ತಿಳಿದಿದೆಯೆಂದು ತೋರುತ್ತೆ.

**ಬಿಷಪ್ :** ಹಾಗೆಂದರೇನು? ನಾನು ಅಜ್ಜಿಯೊಡನೆ ಮಾತಾಡಿರಬೇಕೆಂದೆ?

**ಹಾಗ್‌ಬಾರ್ಡ್ :** ಹೌದು.

**ಬಿಷಪ್ :** ಆಗಲಿ. ಅವಳೊಡನೆ ಮಾತಾಡಿದೆ. ಅವಳು ಸಿರುಕಾಗಿ ಏನೂ ಹೇಳಲಿಲ್ಲ. ಆದರೆ ವಿಷಯಗಳು ಯಾವ ರೀತಿ ಇರಬಹುದೆಂದು ನನಗೆ ತಿಳಿದಿದೆ. ನಿನಗಿಂತಲೂ ಮುಂಚಿತವಾಗಿ ನಾನು ಇದನ್ನು ಕಂಡುಕೊಂಡಿದ್ದೆ. ನಿನಗೆ ಜ್ಞಾಪಕವಿರಬೇಕು.

**ಹಾಗ್‌ಬಾರ್ಡ್:** ಅದು ನಿಜವಾದ ಮಾತು. ಆ ವಿಚಾರದಲ್ಲಿ ನಾನು ಬಹಳ ಒದ್ದಾಡಬೇಕಾಗಿ ಬಂತು. ಎಲ್ಲವೂ ಇತ್ಯರ್ಥವಾಗಿ ನನ್ನ ಹೊಡೆದಾಟ ಈಗ ಮುಗಿಯಿತು.

**ಬಿಷಪ್ :** ಮುಗಿಯಿತು ಎಂದು ಈಗಲೇ ಹೇಗೆ ಹೇಳುವುದಕ್ಕೆ ಆಗುತ್ತೆ?

**ಹಾಗ್‌ಬಾರ್ಡ್ :** ನೀನು ಅದನ್ನು ಒಪ್ಪಿಕೊಳ್ಳುವುದಿಲ್ಲವೆಂದು ನನಗೆ ಗೊತ್ತು. ಈ ಸಮಸ್ಯೆಯಲ್ಲಿ ನನಗೆ ಸಂಪೂರ್ಣ ಜಯ ಲಾಭವಾಗಿದೆ. ಯಾವ ಸಂದೇಹವೂ ಇಲ್ಲ. ಹೆಚ್ಚೇನು? ಮಿಸಸ್ ಫಾಲ್ಕ್‌ಅನ್ನು ನಾನು ಪ್ರೀತಿಸುತ್ತಿದ್ದೇನೆ; ಆಕೆ ನನ್ನನ್ನು ಪ್ರೀತಿಸುತ್ತಿದ್ದಾಳೆ. ಇನ್ನೇನು ಬೇಕು?

**ಬಿಷಪ್ :** ಈಗ ಏನು ಹೇಳುವುದಕ್ಕೂ ನಿನ್ನ ಮನಸ್ಸು ಉದ್ರೇಕದಿಂದ ಕೆರಳಿರುವುದರಿಂದ —

**ಹಾಗ್‌ಬಾರ್ಡ್ :** ಕೆರಳಿಯೂ ಇಲ್ಲ; ಉದ್ರೇಕವೂ ಇಲ್ಲ. ಅದು ನನ್ನ ಮನಸ್ಸಿನಲ್ಲಿ ಉಂಟಾಗಿರುವ ಸಂತೋಷ. ಮಾವ, ಈಗ ಅದು ಇಲ್ಲಿ

—ಸುಮ್ಮನೆ ಏಕೆ ಹೇಳಬೇಕು! ನನಗಾಗಲಿ, ಆಕೆಗಾಗಲಿ ನಿನ್ನ ಆಶೀರ್ವಾದವನ್ನು ಬಯಸುತ್ತಿಲ್ಲ! ಆ ಆಶೀರ್ವಾದವಿಲ್ಲದೆ ನಾವು ಮುಂದುವರಿಯಬೇಕು. ಆದರೆ ಇರುವ ಸ್ಥಿತಿಯನ್ನು ನಿನಗೆ ಸರಿಯಾಗಿ ತಿಳಿಸಬೇಕಾದ್ದು ನನ್ನ ಕರ್ತವ್ಯ. ಈಗ ನಾನು ಹೇಳಿದ್ದು ನಿನ್ನ ಮನಸ್ಸಿಗೆ ತುಂಬಾ ವ್ಯಥೆಯಾಯಿತೆ?

**ಬಿಷಪ್ :** ಹೌದು.

**ಹಾಗ್‌ಬಾರ್ಟ್ :** ನೀನು ಹಾಗೆಂದರೆ ನನ್ನ ಮನಸ್ಸಿಗೆ ತುಂಬಾ ನೋವಾಗುತ್ತೆ, ಮಾವ!

**ಬಿಷಪ್ :** ಏನು, ಮಗು—?

**ಹಾಗ್‌ಬಾರ್ಟ್ :** ನನ್ನ ಮನಸ್ಸನ್ನು ಒಂದೇ ಅಲ್ಲ, ಅವಳ ಮನಸ್ಸನ್ನೂ ನೋಯಿಸುತ್ತೀಯೆ! ಮಾವ, ನಮ್ಮಿಬ್ಬರನ್ನೂ ನೀನು ಸರಿಯಾಗಿ ತಿಳಿದುಕೊಂಡಿರುವಂತೆಯೇ ಇಲ್ಲ.

**ಬಿಷಪ್ :** ಬಾ, ಕುಳಿತುಕೊಂಡು ನಿಧಾನವಾಗಿ ಮಾತಾಡೋಣ, ಹಾಗ್‌ಬಾರ್ಟ್—

**ಹಾಗ್‌ಬಾರ್ಟ್ :** ತಲೆಸವರಿ ನನ್ನ ಮನಸ್ಸನ್ನು ಬದಲಾಯಿಸಲು ಪ್ರಯತ್ನಿಸುವುದಿಲ್ಲವಾದರೆ—

**ಬಿಷಪ್ :** ಏನೂ ಯೋಚನೆ ಮಾಡಬೇಡ ಆ ವಿಷಯದಲ್ಲಿ– ಅವಳ ವಿಷಯದಲ್ಲಿ ನೀನು ಇಟ್ಟಿರುವ ಮನೋಭಾವನೆಗಳು ನಿನ್ನ ಮಾನ ಮರ್ಯಾದೆಗಳಿಗೆ ಏನೂ ಕಡಮೆ ಇಲ್ಲ. ಹಾಗೆಯೇ ನಿನ್ನ ಪ್ರೀತಿಪಾತ್ರಳಾಗಿರಲು ಅವಳು ಅರ್ಹಳು ಎಂತಲೂ ನನಗೆ ಗೊತ್ತಾಗಿದೆ.

**ಹಾಗ್‌ಬಾರ್ಟ್ :** ಏನು ಆಶ್ಚರ್ಯ, ಮಾವ, ನೀನು ಹಾಗೆ ಹೇಳುವುದು? (ಇಬ್ಬರೂ ಕೂಡುವರು.)

**ಬಿಷಪ್ :** ನಿನ್ನನ್ನು ನೋಡಿ ಅನೇಕ ದಿನಗಳಾದುವು. ಏತನ್ಮಧ್ಯೆ ಕೆಲವು ವಿಚಾರಗಳು ಅನುಭವಕ್ಕೆ ಬಂದಿವೆ. ಆಕೆಯನ್ನು ನಾನು ಸರಿಯಾಗಿ ಕಾಣಲಿಲ್ಲ. ಅನ್ಯರ ಅಭಿಪ್ರಾಯಗಳಿಗೆ ಲಕ್ಷ್ಯಕೊಟ್ಟು ದುಡುಕಿ ಆಕೆಯನ್ನು ಕಟುವಾಗಿ ಖಂಡಿಸಿದೆ. ನಾನು ಹಾಗೆ ಮಾಡಬಾರದಾಗಿತ್ತು. ಹಾಗೆ ಮಾಡುವುದು ನಮ್ಮಗಳಲ್ಲಿ ಹರಡಿಕೊಂಡಿರುವ ಒಂದು ಪಾಪ–ಇತರರಿಗೆ

ಔದಾರ್ಯವನ್ನು ತೋರಿಸಿ ಅವರಿಗೆ ಒಳ್ಳೆಯದನ್ನು ಮಾಡುವುದು ನಮ್ಮ ಕರ್ತವ್ಯ. ನಾನು ಆಕೆಯನ್ನು ನಿಂದಿಸಿ ಕೀಳಾಗಿ ಕಾಣುತ್ತಿದ್ದೆ; ಆಕೆಯಿಂದಲೇ ಇತರರ ವಿಷಯದಲ್ಲಿ ಔದಾರ್ಯವನ್ನು ತೋರಿಸಬೇಕೆಂಬ ಪಾಠವನ್ನು ಕಲಿತುಕೊಂಡೆ!

**ಹಾಗ್‌ಬಾರ್ಟ್:** ಏನಿದು ಸಾಧ್ಯವೆ? ಮಾವ, ನಿನ್ನ ಮಾತುಗಳನ್ನು ಕೇಳಿ ಎಷ್ಟು ಸಂತೋಷವಾಯಿತೋ, ನಿನಗೆ ಎಷ್ಟು ಕೃತಜ್ಞನಾಗಿದ್ದೇನೋ ನಾನು ಹೇಳಲಾರೆ.

**ಬಿಷಪ್:** ಹೇಳಬೇಕಾದ್ದು ಇನ್ನೂ ಸ್ವಲ್ಪ ಇದೆ. ಈಕೆಯ ವಿಷಯದಲ್ಲಿ ಅಪವಾದಗಳನ್ನು ನಾವು ಹೊರಸಿದಾಗ ನಿನ್ನನ್ನು ತಪ್ಪುದಾರಿಗೆ ಎಳೆದವರು ನಾವು. ಆಗ ಹೇಳಿದ್ದನ್ನೆಲ್ಲಾ ನಂಬುವ ವಯಸ್ಸು ನಿನ್ನದು. ಚಿಕ್ಕವಯಸ್ಸಿನವರು ಇಂತಹ ಸಂದರ್ಭಗಳಲ್ಲಿ ದೊಡ್ಡವರಿಗಿಂತಲೂ ತೀವ್ರರಾಗಿರುತ್ತಾರೆ. ಈ ಅಪಪ್ರಚಾರದಲ್ಲಿ ನೀನು ನಮ್ಮೆಲ್ಲರಿಗಿಂತಲೂ ತೀವ್ರವಾಗಿಯೇ ಇದ್ದೆ. ಈ ಮನೋಭಾವನೆಯಿಂದ ಒಂದು ಪ್ರತಿಕ್ರಿಯೆ ನಿನ್ನಲ್ಲಿ ಉಂಟಾಯಿತು. ಈ ಪ್ರತಿಕ್ರಿಯೆ ಪ್ರಣಯದಲ್ಲಿ ಕೊನೆಗಂಡಿತು. ಈ ಪ್ರಣಯವನ್ನು ಪಾಪವೆಂದೆಣಿಸುವುದಾದರೆ ಆ ಪಾಪಕ್ಕೆ ನಾವು ಈಡಾಗಬೇಕಾಗುತ್ತೆ.

**ಹಾಗ್‌ಬಾರ್ಟ್:** ಏನು, ಅದು ಪಾಪವೆ?

**ಬಿಷಪ್:** ಅಲ್ಲ – ಪಾಪವಲ್ಲ. ಆದರೆ ಅದು ಪಾಪವೆಂದು ನಾವು ಪರಿಶೀಲಿಸುತ್ತಿರುವಾಗ್ಗೆ — ನಿನ್ನ ಸಹಜವಾದ ನ್ಯಾಯಬುದ್ಧಿಯು ಉದ್ವೇಗಗೊಂಡು ನಿನ್ನ ಪ್ರಣಯವನ್ನು ಮತ್ತಷ್ಟು ಹೆಚ್ಚಿಸಿತು.

**ಹಾಗ್‌ಬಾರ್ಟ್:** ಇದನ್ನು ಕೇಳಿದ ಮೇಲೆ ನಿನ್ನಲ್ಲಿ ನನ್ನ ಪ್ರೀತಿ ಇತೋಽಪ್ಯಧಿಕವಾಗಿದೆ.

**ಬಿಷಪ್:** ಅದಕ್ಕೋಸ್ಕರವೇ ನಾನು ಇಲ್ಲಿ ಕುಳಿತುಕೊಂಡು ಮಾತಾಡೋಣ ಎಂದು ಹೇಳಿದ್ದು! ನಿನ್ನ ಕ್ಷಮಾಪಣೆಯನ್ನು ಕೇಳುವುದಕ್ಕೋಸ್ಕರ; ಆಕೆಯ ಕ್ಷಮಾಪಣೆಯನ್ನೂ; ಮತ್ತು ನನ್ನ ಶಿಷ್ಯವೃಂದದ ಕ್ಷಮಾಪಣೆಯನ್ನು ಕೂಡ. ಆಚಾರ ವ್ಯವಹಾರಗಳಲ್ಲಿ ನನ್ನ ಶಿಷ್ಯರುಗಳಿಗೆ ಸಲಹೆ ಕೊಡುವುದು ನನ್ನ ಕರ್ತವ್ಯ. ಅವರ ವಿವೇಚನಾಶಕ್ತಿಯಲ್ಲಿ ನಾನು ಸಾಕಷ್ಟು ನಂಬಿಕೆಯನ್ನಿಡಲಿಲ್ಲ. ಮುಕ್ಕಾಲುಮೂರು ವೀಸಪಾಲು ಅವರುಗಳು

ಸಾಧುಗಳು. ಧೈರ್ಯಮಾಡಿ ನಾನೇನಾದರೂ ಅವಳನ್ನು ಸರಿಯಾಗಿ ಕಂಡು ನಡೆದುಕೊಂಡಿದ್ದರೆ ಆಗ ಎಲ್ಲರೂ ನನ್ನನ್ನು ಅನುಸರಿಸು ತ್ತಿದ್ದರು.

**ಹಾಗ್‌ಬಾರ್ಟ್‌:** ಮಾವ, ಎಂದಿಗಿಂತಲೂ ನನ್ನ ಮೆಚ್ಚುಗೆ ಮತ್ತು ಗೌರವ ಈಗ ಹೆಚ್ಚಾಗಿದೆ. ಎಲ್ಲರಿಗಿಂತಲೂ ನನ್ನ ಭಾವನೆಗಳು ಅತಿಶಯ ವಾದವುಗಳು!

**ಬಿಷಪ್‌:** (ಎದ್ದುನಿಂತು,) ಆ, ವತ್ಸ —

**ಹಾಗ್‌ಬಾರ್ಟ್‌:** (ಅವನನ್ನು ತಬ್ಬಿಕೊಂಡು,) ಮಾವ, ಮಾವ!

**ಬಿಷಪ್‌:** ನಿನ್ನ ಪ್ರೀತಿಯು ಏನು ಬಂದರೂ ತಡೆದುಕೊಳ್ಳ ಬಲ್ಲುದೆ —?

**ಹಾಗ್‌ಬಾರ್ಟ್‌:** ಏನು ಬೇಕಾದರೂ ಬರಲಿ!

**ಬಿಷಪ್‌:** ಏಕೆಂದರೆ ಕೆಲವು ವೇಳೆ ನಮಗೆ ಸ್ವಾರ್ಥತ್ಯಾಗಬುದ್ಧಿ ಯನ್ನು ಕಲಿಸುವುದಕ್ಕೋಸ್ಕರ ಪ್ರಣಯ ಲಾಭವಾಗುತ್ತೆ!

(ಅಜ್ಜಿ ಪ್ರವೇಶಿಸುವಳು.)

**ಅಜ್ಜಿ:** ಈಗ ನನಗೆ ಹಾಗ್‌ಬಾರ್ಟ್‌ನ ಧ್ವನಿ ಕೇಳಿಸಿದ ಹಾಗೆ ಆಯಿತು.

**ಹಾಗ್‌ಬಾರ್ಟ್‌:** ಅಜ್ಜಿ! (ಅವನು ಮತ್ತು ಬಿಷಪ್ ಅವಳ ಸಹಾಯಕ್ಕೆ ಹೋಗುವರು.) ಅಜ್ಜಿ, ನನಗೆ ಎಷ್ಟು ಸಂತೋಷ ಉಂಟಾಗಿದೆ ನಿನಗೆ ಗೊತ್ತೆ? (ಅವಳ ತೋಳುಗಳನ್ನು ಹಿಡಿದುಕೊಳ್ಳುವನು.)

**ಅಜ್ಜಿ:** ನೀನು ಹೇಳುವುದು ನಿಜವೆ?

**ಬಿಷಪ್‌:** (ಅವಳ ಮತ್ತೊಂದು ತೋಳನ್ನು ಹಿಡಿದುಕೊಂಡು,) ಒಬ್ಬರ ಸಹಾಯವೂ ಇಲ್ಲದೆ ನೀನೊಬ್ಬಳೇ ಓಡಾಡಬಾರದು, ಅಜ್ಜಿ!

**ಅಜ್ಜಿ:** ನನಗೆ ಈಗ ಹಾಗ್‌ಬಾರ್ಟ್‌ನ ಧ್ವನಿ ಕೇಳಿಸಿತು. ಬಹಳ ಗಟ್ಟಿಯಾಗಿ ಮಾತನಾಡುತ್ತಿದ್ದ. ಏನೋ ನಡೆದಿರಬೇಕು ಎಂದು ತೋರಿತು.

ಹಾಗ್‌ಬಾರ್ಟ್: ನೀನು ಯೋಚಿಸಿದ ಹಾಗೆಯೇ ನಡೆದಿದೆ! ಬಹಳ ಒಳ್ಳೇ ವಿಷಯ! ಮಾವ ಒಪ್ಪಿಗೆ ಕೊಟ್ಟಿದ್ದಾನೆ! ಅವನು ಎಂಥಾ ಭರ್ಜರಿ ಮನುಷ್ಯ! ಎಲ್ಲವನ್ನೂ ಸರಿಪಡಿಸಿ ಮೊದಲಿಗಿಂತಲೂ ಸುಲಭವಾಗಿ ಮಾಡಿದ್ದಾನೆ! ಅಜ್ಜಿ, ನೀನು ಚಿಕ್ಕವಳಾಗಿದ್ದರೆ ನಿನ್ನ ತೋಳುಗಳನ್ನು ಹಿಡಿದು ಚಿಕ್ಕಮನೆಯ ಸುತ್ತಾ ನಿನ್ನೊಡನೆ ಕುಣಿದಾಡುತ್ತಿದ್ದೆ.

ಅಜ್ಜಿ: ನೀನು ಹಾಗೆಲ್ಲಾ ಮಾಡಬಾರದು, ಮಗು! (ಅವಳ ಕುರ್ಚಿಯಲ್ಲಿ ಅವಳನ್ನು ಕೂರಿಸುವರು.) ಅದು ಸರಿ. ಹೊಸ ವರ್ತಮಾನವೇನು?

ಹಾಗ್‌ಬಾರ್ಟ್: ಹೊಸ ವರ್ತಮಾನವೆ? ಹೊಸ ವರ್ತಮಾನವೇನೂ ಇಲ್ಲ. ಹೊಸದಾಗಿ ಹೇಳಬೇಕಾದ್ದು ಏನೂ ಇಲ್ಲ.

ಅಜ್ಜಿ: ಇರಬೇಕು. ಏನೋ ಒಂದು ಹೊಸ ವರ್ತಮಾನ ಇರಬೇಕು ಹಾಗ್‌ಬಾರ್ಟ್!

ಹಾಗ್‌ಬಾರ್ಟ್: ನಿನ್ನ ಮಾತನ್ನು ಕೇಳಿದರೆ–ನಿನ್ನ ಮುಖ ನೋಡಿದರೆ, ಅಜ್ಜಿ, ಏನೋ ಒಂದು ವಿಶೇಷ ವರ್ತಮಾನವಿರಬೇಕೆಂದು ತೋರುತ್ತೆ. ನಿನ್ನ ಮನಸ್ಸೂ ಸ್ತಿಮಿತವಾಗಿರುವ ಹಾಗೆ ಕಾಣುವುದಿಲ್ಲ! ಮಾವ, (ಹೊರಗಡೆಯಿಂದ ಗಾಡಿಶಬ್ದ ಕೇಳಿಬರುವುದು.)

ಬಿಷಪ್: ಸ್ವಲ್ಪ ತಾಳು, ಮಗು; ತಾಳು ಸ್ವಲ್ಪ! (ಹಿಂದುಗಡೆ ಬಾಗಿಲಿನಿಂದ ಹೋಗುವನು.)

ಹಾಗ್‌ಬಾರ್ಟ್: ಏನಿರಬಹುದು ಅದು, ಅಜ್ಜಿ?

ಅಜ್ಜಿ: ನನಗೆ ತಿಳಿಯದು. ಆದರೆ ನನ್ನ ಅನುಭವ ಹೇಳುತ್ತೇನೆ, ಕೇಳು. ಅನೇಕ ವೇಳೆ ನಮಗೆ ಲಭಿಸುವುದು ಅಲ್ಪಾವಧಿಯ ಸಂತೋಷಗಳೆ!

ಹಾಗ್‌ಬಾರ್ಟ್: ಅಲ್ಪಾವಧಿ ಸಂತೋಷಗಳು? ನಿನ್ನ ಅರ್ಥವೇನು? ನಿನ್ನ ದಮ್ಮಯ್ಯ, ಅಜ್ಜಿ, ನನಗೆ ಚಿತ್ರಹಿಂಸೆಯನ್ನು ಮಾಡಬೇಡ – ಏನು? ಹೇಳು.

ಅಜ್ಜಿ: ನಿಜವಾಗಿಯೂ ನನಗೆ ಯಾವುದೂ ಗೊತ್ತಿಲ್ಲ–ಆದರೆ—,

ಹಾಗ್‌ಬಾರ್ಟ್: ಆದರೆ–? ಏನು?

ಅಜ್ಜಿ : ನಿನ್ನ ಮಾವ ನನ್ನೊಡನೆ ಮಾತಾಡುತ್ತಿದ್ದಾಗ, ಮಿಸಸ್ ಫಾಲ್ಕ್ ಇಲ್ಲಿಗೆ ಬಂದಿದ್ದಳು.

ಹಾಗ್‌ಬಾರ್ಟ್: ಏನು? ಮಿಸಸ್ ಫಾಲ್ಕ್‌ಏ? ಅವಳು ಇಲ್ಲಿಗೆ ಬಂದಿದ್ದಳೆ? ಸ್ವಲ್ಪ ಮುಂಚೆ?

ಅಜ್ಜಿ : ಹೌದು. ಸ್ವಲ್ಪ ಮುಂಚಿತವಾಗಿ!

ಹಾಗ್‌ಬಾರ್ಟ್: ಹಾಗಾದರೆ ಏನೋ ನಡೆದಿರಬೇಕು. ಪ್ರಾಯಶಃ ಮಾವ ಅವಳನ್ನು—(ಹಿಂದಿನ ಬಾಗಿಲ ಕಡೆಗೆ ಓಡುವನು. ಬಾಗಿಲು ತೆರೆಯುವುದು. ಬಿಷಪ್ ಜೊತೆಯಲ್ಲಿ ಆಗಟ್ ಒಳಗೆ ಬರುವಳು. ಅವರಿಬ್ಬರ ಹಿಂದೆ ಕಾರ್ನೀಲಿಯಾ ಬರುವಳು.) ಆಗಟ್!

ಆಗಟ್ : ಹಾಗ್‌ಬಾರ್ಟ್! (ಚಿಂತಾಪರಳಾಗಿ) ಅತ್ತೆ ಇಲ್ಲಿಲ್ಲವೆ?

ಕಾರ್ನೀಲಿಯಾ : ಇದೇನು? ಅಜ್ಜಿ ಇಲ್ಲಿ! (ಅವಳ ಬಳಿ ಹೋಗುವಳು.)

ಬಿಷಪ್ : ಆಗಟ್, ನಿನಗೆ ಕೊಡಬೇಕೆಂದು ಈ ಕಾಗದವನ್ನು ನಿನ್ನ ಅತ್ತೆ ನನ್ನ ಕೈಲಿ ಕೊಟ್ಟಿದ್ದಾಳೆ. (ಕಾಗದವನ್ನು ಕೊಡುವನು.)

ಹಾಗ್‌ಬಾರ್ಟ್: ಏನು, ಕಾಗದವೆ?

ಅಜ್ಜಿ : ಅದೇನು ವಿಶೇಷ? ಎಲ್ಲಿ ನೋಡೋಣ. (ಅವಳ ಕುರ್ಚಿಯನ್ನು ಮುಂದೆಳೆಯುವರು.)

ಹಾಗ್‌ಬಾರ್ಟ್: ಅದನ್ನು ಗಟ್ಟಿಯಾಗಿ ಓದು, ಆಗಟ್!

ಆಗಟ್ : (ಓದುವಳು.) "ನನ್ನ ಮುದ್ದು ಮಗುವೆ,–ಈ ಕಾಗದ ನಿನ್ನ ಕೈ ಸೇರುವ ಹೊತ್ತಿಗೆ ನಾನು ಊರು ಬಿಟ್ಟು ಹೊರಟುಹೋಗಿರುತ್ತೇನೆ— ಅವನಲ್ಲಿ ನಾನು ಮೋಹಗೊಂಡಿದ್ದೇನೆ, ಯಾರನ್ನು ನೀನು—" (ಕಿರುಚಿಕೊಂಡು ಮೂರ್ಛೆ ಬೀಳುವಳು. ಬಿಷಪ್ ಅವಳನ್ನು ಹಿಡಿದುಕೊಳ್ಳುವನು.)

ಅಜ್ಜಿ: ಅವಳು ಹೊರಟುಹೋದಳೆ!

ಕಾರ್ನೀಲಿಯಾ: "ಅವನಲ್ಲಿ ಮೋಹಗೊಂಡಿದ್ದಾಳೆ. ಯಾರನ್ನು ನೀನು—" ಅಯ್ಯೋ, ಈಗ ದೇವರೇ ಗತಿ—ಹಾಗ್‌ಬಾರ್ಟ್‌ನ ಕಡೆಗೆ ನೋಡಿ!

**ಬಿಷಪ್ :** ಕಾರ್ನೀಲಿಯಾ–(ಅವನ ಬಳಿ ಹೋಗಿ ಸಹಾಯಮಾಡಿ, ಅಗಟ್ ಅನ್ನು ಒಂದು ಮಂಚದ ಮೇಲೆ ಮಲಗಿಸುವರು, ಕಾರ್ನೀಲಿಯಾ ಆಗಟ್ ಬಳಿಯೇ ನಿಂತಿರುವಳು. ಬಿಷಪ್ ಹಾಗ್‌ಬಾರ್ಸ್ಟ್ ಕಡೆಗೆ ತಿರುಗುವನು.) ಹಾಗ್‌ಬಾರ್ಸ್ಟ್ ! (ಹಾಗ್‌ಬಾರ್ಸ್ಟ್ ಬಿಷಪ್‌ಅನ್ನು ತಬ್ಬಿಕೊಳ್ಳುವನು,) ಧೈರ್ಯವನ್ನು ತಾಳು ಮಗು— ಧೈರ್ಯದಿಂದಿರು !

**ಅಜ್ಜಿ :** (ಎದ್ದುನಿಂತು) ಭಾವೋತ್ಕರ್ಷಕಾಲವು ಪುನಃ ಉದಯಿಸಿ ದಂತಿದೆ !

(ತೆರೆ ನಿಧಾನವಾಗಿ ಬೀಳುವುದು.)

# ಲಿಯೊನಾರ್ಡ್ಡಾ—ಕಥಾಸಾರಾಂಶ

## ನಾಟಕ ಆರಂಭವಾಗುವ ಮೊದಲು

ಈ ನಾಟಕದ ಕಥಾನಾಯಕಿ ಮಿಸಸ್ ಲಿಯೊನಾರ್ಡ್ಡಾ ಫಾಲ್ಕ್ (Mrs. Leonarda Falk.) ಇವಳು ನಡುಕಲ ವಯಸ್ಸಿನವಳು. ಮಧ್ಯಪ್ರಾಯ. ಆದರೂ ಆರೋಗ್ಯಸಂಪತ್ತಿನಿಂದೊಡಗೂಡಿ ಸ್ಫುರದ್ರೂಪಿಯಾಗಿದ್ದಳು. ನಾರ್ವೆದೇಶದ ಒಂದು ರೇವುಪಟ್ಟಣದಲ್ಲಿ ವಾಸಿಸುತ್ತಿದ್ದಳು. ಒಬ್ಬೊಂಟಿಗಳಾಗಿ ಎಂಟು ವರ್ಷಗಳಿಂದ ತನ್ನ ಒಬ್ಬ ಸೋದರಸೊಸೆಯನ್ನು ಸಾಕಿಕೊಂಡು, ಸಮಾಜದಲ್ಲಿ ಬೆರೆತು ಕಲೆತು, ವ್ಯವಹಾರಗಳನ್ನು ಇಟ್ಟು ಕೊಂಡಿರದೆ, ತನ್ನಷ್ಟಕ್ಕೆ ತಾನು ವಾಸಮಾಡಿಕೊಂಡಿದ್ದಳು. ಜನರಲ್ ರೋಸೆನ್ (General Rosen) ಎಂಬ ಉನ್ನತ ಸೈನ್ಯಾಧಿಕಾರಿ–ಅಮೆರಿಕಾದಲ್ಲಿ ಯುದ್ಧದಲ್ಲಿ ಹೋರಾಡಿ ಅನೇಕ ಪ್ರಶಸ್ತಿಗಳನ್ನು ಪಡೆದಿದ್ದ ಜನರಲ್ ರೋಸೆನ್—ಇವಳ ಮನೆಗೆ ಹೋಗಿ ಬರುವುದನ್ನು ಇಟ್ಟುಕೊಂಡಿದ್ದನು. ಲಿಯೊನಾರ್ಡ್ಡಾ ಮತ್ತು ರೋಸೆನ್ ವಿಹಾರಾರ್ಥವಾಗಿ ಜೊತೆಯಲ್ಲಿ ಕುದುರೆ ಸವಾರಿ ಹೋಗುತ್ತಿದ್ದರು. ಈ ಕಾರಣದಿಂದಲೂ ಮತ್ತು ಲಿಯೊನಾರ್ಡ್ಡಾ ಎಲ್ಲರಂತೆ ಚರ್ಚಿಗೆ ಹೋಗುತ್ತಿರಲಿಲ್ಲವಾದ್ದರಿಂದಲೂ, ಲಿಯೊನಾರ್ಡ್ಡಾ ವಿಷಯದಲ್ಲಿ ಜನರು ದುರಭಿಪ್ರಾಯವನ್ನು ಇಟ್ಟುಕೊಂಡು, ಲಿಯೊನಾರ್ಡ್ಡಾವನ್ನು ಶೀಲವತಿಯಲ್ಲವೆಂದು ಅನುಮಾನಪಟ್ಟು ಪರಭಾರೆಯಾಗಿ ದೂರುತ್ತಿದ್ದರು. ಸ್ಥಳದ ಮುಖ್ಯ ಪಾದ್ರಿ, ಬಿಷಪ್ (Bishop) ಸರಿಯಾಗಿ ವಿಚಾರ ಮಾಡದೆ ಈ ಅಪವಾದಗಳಿಗೆ ಬೆಂಬಲವಿತ್ತಿದ್ದನು. ದೇವಾರಾಧನೆಗೆ ಚರ್ಚಿಗೆ ಬರದೇ ಇದ್ದದ್ದು, ಮತ್ತು ಆತ್ಮನಿವೇದನಕ್ಕೆ ತನ್ನ ಬಳಿಗೆ ಬರದೇಇದ್ದದು— ಇವೆರಡೂ ಬಿಷಪ್‌ಗೆ ತನ್ನ ಸ್ವಂತ ಅನುಭವದಲ್ಲಿದ್ದ ಲಿಯೊನಾರ್ಡ್ಡಾವಿನ ಮುಖ್ಯ ದೋಷಗಳಾಗಿದ್ದವು.

ತನ್ನ ಜೀವನವನ್ನು ನೆಮ್ಮದಿಯಾಗಿ ನಡೆಸಲು ಲಿಯೊನಾರ್ಡಾಗೆ ಆ ಊರಿನಲ್ಲಿ ಸಾಕಾದಷ್ಟು ಪಿತ್ರಾರ್ಜಿತ ಸ್ವತ್ತು ಇತ್ತು. ಇದರ ಜೊತೆಗೆ ಇಟ್ಟಿಗೆ ಗೂಡುಗಳನ್ನಿಟ್ಟುಕೊಂಡು ಲಿಯೊನಾರ್ಡಾ ಲಾಭವನ್ನು ಸಂಪಾದಿಸುತ್ತಿದ್ದಳು. ಸ್ವಾರ್ಥತ್ಯಾಗ ಮಾಡಿ ತನ್ನ ಸರ್ವಸ್ವವನ್ನೂ ಸೋದರಸೊಸೆ ಮಿಸ್ ಆಗಟ್ (Miss Aagot) ಗೋಸ್ಕರ ಮೀಸಲಾಗಿಟ್ಟು, ಅವಳನ್ನು ಲಿಯೊನಾರ್ಡಾ ಸಾಕಿ ಸಲಹುತ್ತಿದ್ದಳು. ಒಂದು ದಿನ ತನ್ನ ಸಾಕುಮಗಳ ಜೊತೆಯಲ್ಲಿ ಒಂದು ಸಂಗೀತಕಛೇರಿಗೆ ಹೋಗುತ್ತಿದ್ದಾಗ್ಗೆ ಒಂದು ವಿಶೇಷ ನಡೆಯಿತು. ಬಿಷಪ್‌ನ ಸೋದರಅಳಿಯ ಹಾಗ್‌ಬಾರ್ಟ್ (Hagbart) ಎಂಬವನು ಸಂಗೀತ ಮಂದಿರದ ಮುಂಭಾಗದಲ್ಲಿ ನಿಂತುಕೊಂಡು ತನ್ನವರು ಕೆಲವರೊಡನೆ ಮಾತ ನಾಡುತ್ತಾ, ಗಟ್ಟಿಯಾಗಿ ಸುತ್ತಮುತ್ತಲಿನ ಎಲ್ಲರಿಗೂ ಕೇಳುವ ಹಾಗೆ—ಲಿಯೊನಾರ್ಡಾವನ್ನು ಕುರಿತು "ಅವಳ ನಡತೆ ಸ್ವಲ್ಪ ಸಂಶಯಾಸ್ಪದವೆ!" ಎಂದು ಹೇಳಿದ್ದನು. ಇದನ್ನು ಕೇಳಿ ಲಿಯೊನಾರ್ಡಾ ಮತ್ತು ಆಗಟ್ (Miss Aagot) ಇಬ್ಬರಿಗೂ ಬಹಳ ಸಂಕಟವಾಯಿತು ಮತ್ತು ಹಾಗ್‌ಬಾರ್ಟ್ ಮೇಲೆ ಆಗ್ರಹದ್ವೇಷಗಳುಂಟಾದುವು. ತನ್ನ ಮಾವ ಬಿಷಪ್ ಲಿಯೊನಾರ್ಡಾ ವಿಷಯ ದಲ್ಲಿ ಇಟ್ಟುಕೊಂಡಿದ್ದ ಅಭಿಪ್ರಾಯವನ್ನೇ ಹಾಗ್‌ಬಾರ್ಟ್ ಬಹಿರಂಗವಾಗಿ ಹೇಳಿದ್ದನು. ಕೊಂಚಮಟ್ಟಿಗೆ ಲಿಯೊನಾರ್ಡಾ ಮತ್ತು ಹಾಗ್‌ಬಾರ್ಟ್‌ಗಳ ನಡುವಿನ ಸಂಬಂಧ ಎಣ್ಣೆಸೀಗೆಕಾಯಿಗಳಿಗೆ ಇದ್ದಂತೆ ಎಂದು ಹೇಳಬಹುದು. ನಾಟಕದ ಹಿನ್ನೆಲೆ ಇದು.

## ಮೊದಲನೆಯ ಅಂಕ

ಪ್ರಕೃತಿಸೌಂದರ್ಯದಿಂದ ತುಂಬಿ ತುಳುಕುತ್ತಿದ್ದ ಒಂದು ಪ್ರಾತಃ ಕಾಲ. ಲಿಯೊನಾರ್ಡಾ ಕುದುರೆಸವಾರಿಗೆ ತಕ್ಕುದಾದ ಉಡುಪನ್ನು ಧರಿಸಿ ತನ್ನ ಕರಣಿಕನ ಸಂಗಡ ಇಟ್ಟಿಗೆಗೂಡಿನ ಲೆಕ್ಕಗಳನ್ನು ತನಿಖೆ ಮಾಡುತ್ತಿದ್ದಳು. ಆ ಸಮಯಕ್ಕೆ ಜನರಲ್ ರೋಸೆನ್ (General Rosen) ಕುದುರೆ ಸವಾರಿಗೆ ಅವಳನ್ನು ಕರೆದುಕೊಂಡುಹೋಗಲು ಬರುವನು. ಸವಾರಿಗೆ ಹೋಗಲು ಸಿದ್ಧವಾಗಿದ್ದರೂ, ಆ ದಿನ ಅವನ ಜೊತೆಯಲ್ಲಿ ಹೋಗಲು

ಲಿಯೊನಾರ್ಡಾ ಒಪ್ಪುವುದಿಲ್ಲ. ಹಿಂದಿನ ರಾತ್ರಿ ಅವನು ಮಿತಿಮೀರಿ ಮಧು ಪಾನ ಮಾಡಿದ್ದುದೇ ಅದಕ್ಕೆ ಕಾರಣ. ರೋಸೆನ್ ಎಷ್ಟು ಬೇಡಿದರೂ ಲಿಯೊನಾರ್ಡಾ ಅವನ ಪುರೋಭಿವೃದ್ಧಿಯಲ್ಲಿ ಆಸಕ್ತಿ ಹೊಂದಿದ್ದರಿಂದ ಅವಳು ಜನರಲ್ ರೋಸೆನ್‌ಅನ್ನು ಪುನಃ ಅಮೇರಿಕಾಕ್ಕೆ ಕಳುಹಿಸಿ ಸೈನ್ಯಾಧಿಕಾರ ವನ್ನು ಪುನಃ ವಹಿಸಿಕೊಳ್ಳಬೇಕೆಂದು ತನ್ನ ಕೈಲಾದಮಟ್ಟಿಗೆ ಒತ್ತಾಯ ಪಡಿಸುವಳು. ಲಿಯೊನಾರ್ಡಾವನ್ನು ಬಿಟ್ಟು ಹೋಗಲು ಅವನಿಗೆ ಮನಸ್ಸಿಲ್ಲದ್ದ ರಿಂದ ಅವಳ ಪ್ರಯತ್ನಗಳು ವ್ಯರ್ಥವಾಗಿರುವಂತೆ ಇವೆ. ಈ ಸಮಯದಲ್ಲಿ ಲಿಯೊನಾರ್ಡಾ ಮನೆಗೆ ಹಾಗ್‌ಬಾರ್ಟ್ (Hagbart) ಬರುವನು. ಜನರಲ್ ರೋಸೆನ್ ಹೊರಟುಹೋಗುವನು.

ಅವನಾರು ಎಂದು ತಿಳಿದೊಡನೆ ಲಿಯೊನಾರ್ಡಾ ಕೋಪಿಸಿಕೊಂಡು "ನನ್ನನ್ನು ಬಹಿರಂಗವಾಗಿ ಸಂಶಯಾಸ್ಪದದ ನಡತೆಯ ಹೆಂಗಸೆಂದು ನೀನು ನಿಂದಿಸಲಿಲ್ಲವೆ?" ಎಂದು ಕೇಳಿದ ಪ್ರಶ್ನೆಗೆ ಹಾಗ್‌ಬಾರ್ಟ್ "ಹೌದು" ಎಂದು ಉತ್ತರಕೊಟ್ಟು, ತಾನು ಅಲ್ಲಿಗೆ ಬಂದ ಕಾರಣವನ್ನು ಅವಳಿಗೆ ತಿಳಿಸಲು ಪ್ರಯತ್ನಪಡುವನು. ಲಿಯೊನಾರ್ಡಾ ಅವನನ್ನು ಪುನಃಪುನಃ ತಡೆದು, ತನ್ನ ಮನೆಗೆ ಅವನು ಬರಕೂಡದೆಂದು ಹೇಳಿ, ಮನೆಯ ಆಳನ್ನು ಕೂಗಿ ಹಾಗ್‌ಬಾರ್ಟ್‌ಅನ್ನು ಹೊರಗೆ ಕಳುಹಿಸೆಂದು ಆಜ್ಞಾಪಿಸುವಳು. ಹಾಗ್ ಬಾರ್ಟ್ ಹೆದರಿಕೊಂಡು ಎಡವರಿಸುತ್ತಾ ತಡವರಿಸುತ್ತಾ ಪ್ರಯಾಸಪಟ್ಟು ಕೊಂಡು ತಾನು ಆಗಟ್ ವಿಷಯ ಮಾತಾಡುವ ಉದ್ದೇಶದಿಂದ ಅಲ್ಲಿಗೆ ಬಂದಿರುವುದಾಗಿ ಹೇಳುವನು.

ಆಗಟ್ ಊರಲ್ಲಿರಲಿಲ್ಲ. ಸಮುದ್ರತೀರದಲ್ಲಿ ಒಂದು ವಿಹಾರಸ್ಥಳಕ್ಕೆ ವಿಶ್ರಾಂತಿಗೆ ಹೋಗಿದ್ದಳು. ಬಹಳ ದಿನಗಳಿಂದ ಅವಳ ವರ್ತಮಾನವೇನೂ ತಿಳಿದಿರಲಿಲ್ಲ. ಲಿಯೊನಾರ್ಡಾ ಅವನ ಮಾತುಗಳನ್ನು ಕೇಳಿ ಕುತೂಹಲಿ ಯಾಗುವಳು. ಇದನ್ನು ನೋಡಿ ಹಾಗ್‌ಬಾರ್ಟ್—ಲಿಯೊನಾರ್ಡಾ ತನ್ನ ಮಾತು ಗಳಿಗೆ ಸಲೀಸಾಗಿ ಅವಕಾಶ ಕೊಡದಿದ್ದರೂ-ತನ್ನ ಕತೆಯನ್ನು ಹೇಳುವನು. ತಾನೂ ಕೂಡ ಅದೇ ವಿಹಾರಸ್ಥಳಕ್ಕೆ ಹೋಗಿದ್ದು; ಆಗಟ್‌ಅನ್ನು ಅಲ್ಲಿ ಕಂಡದ್ದು; ಅವಳು ಅವನನ್ನು ನೋಡದಿರುವುದಕ್ಕೆ ತನ್ನ ಕೈಲಾದ ಮಟ್ಟಿಗೆ ಪ್ರಯತ್ನಮಾಡಿದ್ದು; ಕಾಲಕ್ರಮೇಣ ಸಮಾನಸ್ನೇಹಿತರೊಡನೆ ಕಲೆತು,

ಕೊನೆಗೆ ಇಬ್ಬರೂ ವ್ಯವಹರಿಸಿದ್ದು; ಅವರಿಬ್ಬರಲ್ಲೂ ಅನ್ಯೋನ್ಯ ಪ್ರಣಯ ವುಂಟಾಗಿ ಹಾಗ್‌ಬಾರ್ಟ್ ಅವಳನ್ನು ಮದುವೆ ಮಾಡಿಕೊಳ್ಳಲು ಬಯಸಿದ್ದು;—ಎಲ್ಲವನ್ನೂ ಹೇಳಿ, ಆಗಟ್‌ಅನ್ನು ಮದುವೆಯಾಗಲು ಲಿಯೊನಾರ್ಡಾವಿನ ಅಪ್ಪಣೆಯನ್ನು ಕೇಳುವನು. ಲಿಯೊನಾರ್ಡಾ ಮತ್ತಷ್ಟು ಕೋಪಿಸಿಕೊಂಡು—ತನ್ನ ಸೊಸೆಯ ನೆಪಮಾಡಿಕೊಂಡು ಪುನಃ ತೊಂದರೆಗಳನ್ನು ಕೊಡಲು ತನ್ನ ಮನೆಯ ಹತ್ತಿರ ಕೂಡ ಬರಕೂಡದೆಂದು ಹೇಳಿ ಹಾಗ್‌ಬಾರ್ಟ್‌ಅನ್ನು ಹೆದರಿಸಿ ಅಟ್ಟುವಳು. ಆ ಸಮಯಕ್ಕೆ ಆಗಟ್ ಬರುವಳು.

ಕುಶಲಪ್ರಶ್ನೆಗಳಾದ ಮೇಲೆ ಹಾಗ್‌ಬಾರ್ಟ್ ಸೂಚಿಸಿದ್ದ ಮದುವೆಯ ವಿಚಾರವನ್ನು ಚರ್ಚಿಸುವರು. ತಮ್ಮನ್ನು ನಿಂದಿಸಿ ಅವಮಾನಪಡಿಸಿದ್ದ ಹಾಗ್‌ಬಾರ್ಟ್‌ಅನ್ನು ತಿರಸ್ಕರಿಸದೆ–ಅವನ ಸಂಗಡ ಮಾತುಕತೆಗಳನ್ನಾಡಿ ವ್ಯವಹರಿಸಿ ಸ್ನೇಹ ಬೆಳಸಿ ಕೊನೆಗೆ ಅವನನ್ನು ಮದುವೆಯಾಗಲು ಸಿದ್ಧಳಾಗಿರುವ ಆಗಟ್‌ಅನ್ನು ಕೃತಘ್ನಳೆಂದು ಆರೋಪಿಸಿ, ಅವನನ್ನೇ ಹುಡುಕಿಕೊಂಡು ಹೋಗೆಂದು ಲಿಯೊನಾರ್ಡಾ ಕೋಪದಿಂದ ಹೇಳುವಳು ಆದಕ್ಕೆ ಸಮಂಜಸವಾದ ಸಮಾಧಾನವನ್ನು ಹೇಳುತ್ತಾ ಆಗಟ್–"ನಾನು ಅವನ ಮುಖವನ್ನೇ ನೋಡಬಾರದು ಮತ್ತು ಅವನೊಡನೆ ಮಾತಾಡಬಾರದು ಎಂದೇ ಇದ್ದೆ. ಆದರೆ ಅವನು, ತಾನು ಮಾಡಿದ್ದು ದೊಡ್ಡ ಅಪರಾಧವೆಂದೂ, ಆ ಅಪರಾಧ ಈಗ ತನಗೆ ಪೂರ್ಣವಾಗಿ ಅರಿವಾಗಿದೆಯೆಂದೂ ಎಲ್ಲೆಲ್ಲೂ ಎಲ್ಲರ ಎದುರಿಗೂ, ನನ್ನ ಪ್ರತ್ಯಕ್ಷದಲ್ಲೂ ಹೇಳಿ ಪಶ್ಚಾತಾಪಪಡುತ್ತಿದ್ದ. ನನ್ನ ಗುರುತು ಮಾಡಿಕೊಂಡ ಮೇಲೆ ನೂರಾರು ಸಾರಿ ನನಗೂ ಹೇಳಿದ. ಮುಖತಃ ನಿನ್ನ ಪರಿಚಯವಿಲ್ಲದಿದ್ದರೂ ನನ್ನನ್ನು ನೋಡಿ ನನ್ನ ನಡತೆಗಳಿಂದ ನಿನ್ನ ಪರಿಚಯ ತನಗೆ ತಕ್ಕಷ್ಟು ಆಗಿದೆಯೆಂದೂ—ನನ್ನಂತಹ ಹುಡುಗಿಯನ್ನು ಸಾಕಿ ಸಲಹಿದ ನೀನು ಅಸಾಧಾರಣ ವ್ಯಕ್ತಿಯಾಗಿರಬೇಕೆಂದೂ, ಶಕ್ತಿ, ಧೈರ್ಯ, ಸಾಮರ್ಥ್ಯ ಇತ್ಯಾದಿಗಳಿಂದ ಕೂಡಿದ ಗುಣಶೀಲಾನ್ವಿತೆಯಾದ ಸ್ತ್ರೀರತ್ನವಾಗಿರಬೇಕು ಎಂದೂ ನಿನ್ನ ಗುಣಕಥನ ಮಾಡಿದ. ಅವನಲ್ಲಿ ನನಗೆ ಪ್ರೀತ್ಯಾದರಗಳುಂಟಾದುವು" ಎಂದು ಹೇಳುವಳು. ಅಲ್ಲದೆ ಹಾಗ್‌ಬಾರ್ಟ್ ರೂಪವಂತ—ಅವನ ಕಣ್ಣುಗಳನ್ನು ನೋಡಿದರೇ ಸಾಕು! ಲಿಯೊನಾರ್ಡಾ ಮನಸ್ಸು ಕರಗಿ, ಹಾಗ್‌ಬಾರ್ಟ್‌ಗೆ

ಹೇಳಿ ಕಳುಹಿಸಿ-ಅವನ ಕ್ಷಮಾಪಣೆಯನ್ನು ಕೇಳಿ, ಆಗಟ್‌ನೊಡನೆ ಅವನ ಮದುವೆಗೆ ಸಮ್ಮತಿ ಕೊಡುವಳು—ಎನ್ನುತ್ತಾಳೆ, ಆಗಟ್.

ಇದು ಮೊದಲನೆಯ ಅಂಕ.

## ಎರಡನೆಯ ಅಂಕ

ಎಂಟು ಹತ್ತು ವಾರಗಳಾಗುವುವು. ಆ ಕಾಲದಲ್ಲಿ ಆಗಟ್ ಮತ್ತು ಲಿಯೊನಾರ್ಡ್ಡಾ ಇವರುಗಳನ್ನು ಕಾಣುವುದಕ್ಕಾಗಿ ಹಾಗ್‌ಬಾರ್ಟ್ಸ್ ಅವರ ಮನೆಗೆ ಹೆಚ್ಚು ಕಡಮೆ ಪ್ರತಿದಿನವೂ ಹೋಗಿಬರುತ್ತಿದ್ದನು. ತನ್ನ ಸೋದರ ಮಾವನಾದ ಬಿಷಪ್ಪನ್ನು (Bishop) ಪ್ರಯಾಸದಿಂದ ಆಗಟ್ಟನ್ನು ಮದುವೆಯಾಗಲು ಒಪ್ಪಿಸಿರುವನು. ಆದರೆ ಬಿಷಪ್ ತನ್ನ ಸಮ್ಮತಿಗೆ ಒಂದು ಷರತ್ತು ಹಾಕಿರುವನು. ಅದೇನೆಂದರೆ—ತನ್ನ ಮನೆಯವರಿಗೂ ಮತ್ತು ಲಿಯೊನಾರ್ಡ್ಡಾವಿಗೂ ಯಾವ ವ್ಯವಹಾರಗಳೂ ಇರಕೂಡದು, ಅಲ್ಲದೆ ಅವಳು ಬೇರೊಂದು ಊರಲ್ಲಿ ಹೋಗಿ ವಾಸಮಾಡಿಕೊಂಡಿರಬೇಕು ಎಂಬುದಾಗಿ!

ತದ್ವಿಷಯುಕವಾದ ಸಂಭಾಷಣೆಯಲ್ಲಿ ತೊಡಗಿರುವ ಬಿಷಪ್ ಮತ್ತು ಹಾಗ್‌ಬಾರ್ಟ್ಸರೊಡನೆ ಎರಡನೇ ಅಂಕ ಪ್ರಾರಂಭವಾಗುವುದು. ಲಿಯೊನಾರ್ಡ್ಡಾವಿಗೆ ತನ್ನ ಅಭಿಮತವನ್ನು ತಿಳಿಸಲು ಅವಳಿಗೆ ಬಿಷಪ್ ಒಂದು ಕಾಗದವನ್ನು ಬರೆಯುವನು. ಆ ಕಾಗದದ ಪ್ರತಿಯನ್ನು ಹಾಗ್‌ಬಾರ್ಟ್ಸಿಗೆ ಓದಹೇಳುವನು. ಆದರೆ ಹಾಗ್‌ಬಾರ್ಟ್ಸ್ ಆ ಕಾಗದವನ್ನು ಕಳುಹಿಸುವುದಕ್ಕೆ ಮುಂಚೆ ತನ್ನ ಮಾವ ಲಿಯೊನಾರ್ಡ್ಡಾವನ್ನು ಒಂದು ಬಾರಿಯಾದರೂ ನೋಡಿ ಮಾತನಾಡಬೇಕೆಂದು ಒತ್ತಾಯಪಡಿಸುವನು- ಆದರೆ ಕಾಗದ ರವಾನೆಯಾಗಿ ಬಿಟ್ಟಿತ್ತು. ಹಾಗ್‌ಬಾರ್ಟ್ಸ್ ನೊಂದುಕೊಂಡು ಮಾವನೊಡನೆ ಲಿಯೊನಾರ್ಡ್ಡಾ ಪರವಾಗಿ ಅತಿ ತೀವ್ರವಾಗಿ ವಾದಿಸುವನು. ಅವಳ ಗುಣಗಳನ್ನು ಪ್ರಶಂಸಿಸುವನು. ಹಾಗ್‌ಬಾರ್ಟ್ಸ್ ತೋರಿಸುತ್ತಿದ್ದ ಲಿಯೊನಾರ್ಡ್ಡಾವಿನ ಮೇಲಿನ ಅತ್ಯಾಸಕ್ತಿಯನ್ನು ಕಂಡು—ಹಾಗ್‌ಬಾರ್ಟ್ಸ್ ನಿಜವಾಗಿಯೂ ಯಾರನ್ನು ಪ್ರೀತಿಸುತ್ತಿದ್ದಾನೋ --ಆಗಟ್ ಅಥವಾ ಲಿಯೊನಾರ್ಡ್ಡಾ—ಎಂಬ ಸಂದೇಹ ಬಿಷಪ್ಪಿನ ಮನಸ್ಸಿನಲ್ಲುಂಟಾಗುತ್ತೆ! ಊರುಬಿಟ್ಟು ಸ್ಥಳ ಬದಲಾಯಿಸಿ ಎಲ್ಲವನ್ನೂ ಕೂಲಂಕಷವಾಗಿ ಯೋಚಿಸಿ ಸಮಾಧಾನ ಸ್ಥಿತಿಯಲ್ಲಿ ಶಾಂತನಾಗಿ

ವಾಪಸ್ಸು ಬರುವಂತೆ ತನ್ನ ಸೋದರಅಳಿಯನಿಗೆ ಬಿಷಪ್ ಬುದ್ಧಿವಾದ ಹೇಳುವನು. ಆದರೆ ಲಿಯೊನಾರ್ಡನನ್ನು ಬಿಟ್ಟಿರಲಾರದೆ ಹಾಗ್‌ಬಾರ್ಟ್ ಒಪ್ಪುವುದಿಲ್ಲ. ಹಾಗೆಂದು ಮಾವನಿಗೆ ಹೇಳಿ–ಹೊರಗೆ ಹೋಗಿ ಸ್ವಲ್ಪ ಸುತ್ತಾಡಿಕೊಂಡು ಬರುತ್ತೇನೆಂದು ಹಾಗ್‌ಬಾರ್ಟ್ ಹೋಗುವನು.

ಸಮಾಜದಲ್ಲಿ ಬಿಷಪ್ಪಿನ ಸ್ಥಾನ ಬಹಳ ಮುಖ್ಯವಾದದ್ದು. ಅವನು ಎಲ್ಲರಿಗೂ ಗುರು. ಅವನು ಆದರ್ಶಮನುಷ್ಯನಂತೆ ನಡೆದುಕೊಳ್ಳಬೇಕು. ಆಚಾರ ವ್ಯವಹಾರ ಸಂಪ್ರದಾಯ ವಿಷಯಗಳಲ್ಲಿ ಅವನದೇ ಕೊನೆಯ ತೀರ್ಪು. ಅವನು ಸಮಾಜದ ಧರ್ಮಾಧಿಕಾರಿ. ಜನಗಳ ಇಂಗಿತವನ್ನರಿತು ಅವನು ನಡೆದುಕೊಳ್ಳುವನು. ನಿರ್ದೋಷಿಗಳನ್ನು ರಕ್ಷಿಸುವುದೂ, ದೋಷಿಗಳನ್ನು ಬಹಿಷ್ಕರಿಸುವುದೂ ಅವನ ಕರ್ತವ್ಯ. ಚರ್ಚಿನಲ್ಲಿ ದೇವಾರಾಧನೆಯನ್ನು ನಡಸಿ ಸದ್ಬೋಧನ ಪ್ರಚಾರ ಮಾಡುವುದೂ ಮತ್ತು ತಪ್ಪೊಪ್ಪಿಕೆ (Confessional)ಗೆ ಬಂದವರನ್ನು ಸಮಾಧಾನ ಮಾಡಿ ಅವರ ಶ್ರದ್ಧೆ ಮತ್ತು ದೈವಭಕ್ತಿಗಳನ್ನು ವೃದ್ಧಿಗೊಳಿಸುವುದೂ ಅವನ ಕರ್ತವ್ಯಗಳು. ತನ್ನ ಆತ ಶಿಷ್ಯವೃಂದದ ಸ್ಥಿರವಾದ ನೆರವು, ಬಿಷಪ್ ಸಮಾಜದ ಧರ್ಮರಾಜ! ಲಿಯೊನಾರ್ಡನೊಡನೆ ವ್ಯವಹಾರಗಳನ್ನು ನಿಷೇಧಿಸುವುದಕ್ಕೂ ಇದೇ ಮುಖ್ಯ ಕಾರಣ.

ಈ ಸಂದರ್ಭದಲ್ಲಿ ಹಾಗ್‌ಬಾರ್ಟ್ ಮತ್ತು ಆಗಟ್—ಇಬ್ಬರು ಯುವಕ ಯುವತಿಯರಿಗೂ ಸಹಾನುಭೂತಿಯನ್ನು ತೋರಿಸುತ್ತಿದ್ದವಳು "ಅಜ್ಜಿ." ಹಾಗ್‌ಬಾರ್ಟ್ ಸುತ್ತಾಡಿಕೊಂಡು ಬರಲು ಹೊರಗೆ ಹೋಗುವ ಮುನ್ನ ಅಜ್ಜಿ ಪ್ರವೇಶಿಸುವಳು ಮತ್ತು ಅವನೊಡನೆ ಕೆಲವು ಮಾತುಗಳನ್ನಾಡಿ ಅವನಿಗೆ ಧೈರ್ಯಕೊಡುವಳು. ಅಜ್ಜಿಗೆ ತೊಂಬತ್ತು ವರ್ಷ ಮೀರಿ ವಯಸ್ಸಾಗಿತ್ತು. ಮನೆಗೆ ಹಿರಿತಲೆ—ಯಜಮಾನಿ. ಆವಳದು ಸರಳವಾದ ಮಧುರ ಸ್ವಭಾವ. ಮೃದುಭಾಷಿಣಿ–ಕೋಮಲ ಹೃದಯವುಳ್ಳವಳು. ಕರುಣಾರಸಭರಭರಿತೆ. ವಂದ್ಯ ವೃದ್ಧಮಾತೆ. ತಾಳ್ಮೆಯ ತೌರುಮನೆ. ಎಲ್ಲರ ಪ್ರೀತಿಗೌರವಗಳಿಗೆ ಪಾತ್ರಳಾಗಿದ್ದಳು. ಈ ಸಮಯದಲ್ಲಿ ನಗರದ ಶ್ರೇಷ್ಠ ನ್ಯಾಯಾಧೀಶ ಮತ್ತು ಅವನ ಹೆಂಡತಿ–ಮಿಸ್ಟರ್ ಮತ್ತು ಮಿಸಸ್ ರೋಸ್ಟ್—ಬಿಷಪ್‌ಅನ್ನು ಹುಡುಕಿಕೊಂಡು ಬರುವರು. ಆಗಟ್‌ನೊಡನೆ ಹಾಗ್‌ಬಾರ್ಟ್‌ನ ಮದುವೆಯ

ವದಂತಿ ಕೇಳಿ–ಇನ್ನು ಮುಂದೆ ಲಿಯೊನಾರ್ಡ್ಡಾವಿನೊಡನೆ ವ್ಯವಹಾರಗಳನ್ನು ಇಟ್ಟುಕೊಳ್ಳುವ ವಿಷಯದಲ್ಲಿ ಬಿಷಪ್ಪಿನ ಅಭಿಪ್ರಾಯವನ್ನು ತಿಳಿದುಕೊಳ್ಳಲು ಗಂಡಹೆಂಡಿರಿಬ್ಬರೂ ಅಲ್ಲಿಗೆ ಬಂದಿದ್ದರು ಬಿಷಪ್ಪಿನ ಅಭಿಪ್ರಾಯ ಗೊತ್ತಾದ ಮೇಲೆ ಅವರಿಬ್ಬರೂ ಹೊರಡಲಿರುವರು. ಆ ಸಮಯಕ್ಕೆ ಸರಿಯಾಗಿ ಲಿಯೊನಾರ್ಡ್ಡಾ ಪ್ರವೇಶಿಸುವಳು. ಕೆಲವು ಕ್ಷಣಗಳನಂತರ ಗಂಡ ಹೆಂಡಿರಿಬ್ಬರೂ ಲಿಯೊನಾರ್ಡ್ಡಾವಿಗೆ ದೂರದಿಂದಲೇ ತಲೆಯಾಡಿಸಿ ಹೋಗುವರು. ಬಿಷಪ್ ಮತ್ತು ಲಿಯೊನಾರ್ಡ್ಡಾ ಎದುರುಬದುರಾಗಿ ಮುಖಾಮುಖಿಯಾಗಿ ನಿಲ್ಲುವರು.

ಬಿಷಪ್ ತನಗೆ ಬರೆದಿದ್ದ ಕಾಗದದ ವಿಷಯ ಮಾತಾಡಲು ಬಂದಿರುವುದಾಗಿ ತಿಳಿಸಿ ವಿನೀತಳಾಗಿ ಮರ್ಯಾದೆಯಿಂದ ಲಿಯೊನಾರ್ಡ್ಡಾ ನಡೆದುಕೊಳ್ಳುವಳು. ಬಿಷಪ್ ಕೂಡ ತನ್ನ ಸ್ಥಾನಮಾನಗಳಿಗೆ ಅನುಗುಣವಾಗಿ ಗಂಭೀರವಾಗಿ ನಡೆದುಕೊಳ್ಳುವನು. ಕಾಗದವನ್ನು ವಾಪಸ್ಸು ತೆಗೆದುಕೊಂಡು ತನ್ನನ್ನು ಊರುಬಿಟ್ಟುಓಡಿಸಲು ಪ್ರಯತ್ನಮಾಡದೆ–ಅದಕ್ಕೆ ಬದಲಾಗಿ ತನ್ನೊಡನೆ ಯಥೋಚಿತವಾಗಿ ವ್ಯವಹಾರಗಳನ್ನು ಇಟ್ಟುಕೊಂಡು, ಆಗಟ್–ಹಾಗ್‌ಬಾರ್ಟ್‌ಗಳ ಸುಖಸಂತೋಷಗಳಲ್ಲಿ ಭಾಗಿಯಾಗಿ ತನ್ನ ಜೀವನವನ್ನು ಸಾರ್ಥಕಗೊಳಿಸಲು ಸಹಾಯಮಾಡಬೇಕೆಂದು ಬಿಷಪ್‌ಅನ್ನು ಲಿಯೊನಾರ್ಡ್ಡಾ ಪ್ರಾರ್ಥಿಸುವಳು. ಇದೇ ಅವಳ ಮುಖ್ಯ ವಾದ. ತನ್ನ ಇತ್ಯರ್ಥವನ್ನು ಬದಲಾಯಿಸಲು ಅಸಾಧ್ಯವೆಂದೂ ಅದಕ್ಕೆ ಸರಿಯಾದ ಕಾರಣಗಳಿವೆಯೆಂದೂ ಬಿಷಪ್ ಹೇಳುವನು. ಇದೇ ಅವನ ಪ್ರತಿವಾದ! ತಮ್ಮ ತಮ್ಮ ದೃಷ್ಟಿಯಿಂದ ನ್ಯಾಯಬದ್ಧವಾಗಿ ಕಾಣುವ ಅಭಿಪ್ರಾಯಗಳನ್ನು ಯುಕ್ತಿಯುಕ್ತವಾಗಿ ಹೇಳುವರು. ಸವಾಲ್ ಜವಾಬು ಏಕಸಮನಾಗಿ ಮುಂದುವರಿಯುವುದು. ಯಾರು ತಪ್ಪು? ಯಾರು ಸರಿ?

ಬಿಷಪ್‌ಅನ್ನು ಕುರಿತು —

ಲಿಯೊನಾರ್ಡ್ಡಾ— “ಗುರುಗಳು ತಮ್ಮ ಕಾಗದದಲ್ಲಿ ಬರೆದಿರುವುದು ಆಗಟ್‌ಗೆ ತಿಳಿದರೆ ಅವಳು ಹಾಗ್‌ಬಾರ್ಟ್‌ನೊಡನೆ ಮದುವೆಗೆ ಒಪ್ಪುವುದಿಲ್ಲ. ನಿಮ್ಮ ಮನೆಯಲ್ಲಿ ಒಂದು ಗೌರವಸ್ಥಾನ ಪಡೆಯಲು ನಿಮ್ಮ ತೀರ್ಪಿಗೆ

ನನ್ನನ್ನು ಬಲಿಕೊಟ್ಟು, ನನ್ನನ್ನು ಊರಿನಿಂದ ಅಟ್ಟಿ ಓಡಿಸಿ, ತಾನು ನನ್ನನ್ನು ಬಿಟ್ಟು ಇಲ್ಲಿ ಸುಖವಾಗಿರಲು ಖಂಡಿತ ಒಪ್ಪುವುದಿಲ್ಲ. ನನ್ನ ಅಪರಾಧ ವಾದರೂ ಏನು? ನಾನು ಯಾರಿಗಾದರೂ ಏನಾದರೂ ಕೆಟ್ಟದ್ದು ಮಾಡಿ ದೇನೆಯೆ? ನನ್ನ ಮೇಲೆ ಯಾರಾದರೂ ದೂರು ಹೇಳಿದಾರೆಯೆ? ನಾನು ಯಾರ ಮೇಲಾದರೂ ದೂರು ಹೇಳಿದೇನೆಯೆ? ನನ್ನ ಭೃತ್ಯರ ಮೇಲೆ ದೂರೇನಾದರೂ ಬಂದಿದೆಯೆ? ಎಂಟು ವರ್ಷಗಳಿಂದಲೂ ಆಗಟ್‌ಅನ್ನು ಸುಶಿಕ್ಷಿತಳನ್ನಾಗಿ ಮಾಡುವ ಕ್ರಮಗಳಲ್ಲಿ ಏನಾದರೂ ನ್ಯೂನತೆ ಗಳಿವೆಯೆ? ........"

ಬಿಷಪ್—"ನೀನು ಹೇಳಿದ ಯಾವ ವಿಷಯದಲ್ಲೂ ಏನೂ ನ್ಯೂನತೆ ಗಳಿಲ್ಲ. ನೀನು ಆದರ್ಶವ್ಯಕ್ತಿಯಂತೆ ನಡೆದುಕೊಂಡಿದ್ದೀಯೆ! ಎಲ್ಲರೂ ಮೆಚ್ಚುವಂತೆ! ಆದರೆ...."

ಲಿಯೊನಾರ್ಡಾ—"ಆದರೆ....?"

ಬಿಷಪ್—"ನೀನು ಹೆಂಗಸು–ನಾನು ಹೇಗೆ ಹೇಳಲಿ?...."

ಲಿಯೊನಾರ್ಡಾ—"ಸಂಕೋಚಪಟ್ಟುಕೊಳ್ಳಬೇಡಿ. ನಾನು ಹೇಳಿ ನಿಮಗೆ ಸಹಾಯ ಮಾಡುತ್ತೇನೆ — ಜನರಲ್ ರೋಸೆನ್ ವಿಷಯ ತಾನೆ?...."

ಬಿಷಪ್—"ನೀನೇ ಹೇಳಿದ್ದೀಯೆ—ಹೌದು!—"

ಲಿಯೊನಾರ್ಡಾ—"ಕೇವಲ ಆತನ ಮೇಲಿನ ಅಭಿಮಾನದಿಂದ ಆತನ ಪುರೋಭಿವೃದ್ಧಿಯಲ್ಲಿ ಆಸಕ್ತಿಗೊಂಡು ಆತನನ್ನು ಸರಿಯಾದ ಮಾರ್ಗಕ್ಕೆ ತರೋಣವೆಂದು ಪ್ರಯತ್ನಮಾಡುತ್ತಿರುವುದು. ಮತ್ತೇನೂ ಇಲ್ಲ. ಆ ಕೆಲಸ ಅಸಾಧ್ಯವಾಗಿ ಕಂಡರೂ ಆತನಲ್ಲಿ ಅನುಕಂಪವನ್ನು ತೋರಿಸಬೇಕು ಇದನ್ನು ನೀವು ಒಪ್ಪಬೇಕು. ನೀವು ಆರಾಧಿಸುವ ದೇವರು ಕೂಡ ತಪ್ಪಿತಸ್ಥರಲ್ಲಿ ಅನುಕಂಪವನ್ನು ತೋರಿಸಿ ಸಹಾಯ ಮಾಡುತ್ತಾನೆ. ನೀವು ಕೂಡ ನನ್ನ ವಿಷಯದಲ್ಲಿ ಅದೇ ಭಾವನೆಯಿಂದೊಡಗೂಡಿ ನನಗೆ ಸಹಾಯ ಮಾಡಬೇಕು. ನಾನು ನಿರ್ದೋಷಿಯೆಂದು ನಿಮಗೆ ಈಗ ಚೆನ್ನಾಗಿ ತಿಳಿದಿದೆ!"

ಬಿಷಪ್: "ಎಲ್ಲರಂತೆ ದೇವಾರಾಧನೆಗೆ ಬಂದು ಹಾಗೆಯೆ ತಪ್ಪೊಪ್ಪಿಕೆಗೆ

ನನ್ನಲ್ಲಿಗೆ ಉಚಿತ ಮನೋವೃತ್ತಿಯಲ್ಲಿ ಬಂದರೆ ನನ್ನ ಕೈಲಾದ್ದನ್ನೆಲ್ಲಾ ಮಾಡುತ್ತೇನೆ."

ಹಾಗೆಂದು ಹೇಳಿ, ಜನಗಳು ತನ್ನಲ್ಲಿ ಇಟ್ಟಿರುವ ನಂಬಿಕೆ ಮತ್ತು ಸಮಾಜದಲ್ಲಿ ತಾನು ಹೇಗೆ ನಡೆದುಕೊಳ್ಳಬೇಕು ಎಂಬುವ ವಿಷಯಗಳನ್ನು ವಿಶದಪಡಿಸುವನು. ಕಾಗದವನ್ನು ವಾಪಸ್ಸು ತೆಗೆದುಕೊಂಡು ತನ್ನ ಪ್ರಾರ್ಥನೆಗಳನ್ನು ನಡಸಿಕೊಡಬೇಕೆಂದು ಹೇಳುತ್ತಾ ಕಾಗದವನ್ನು ಹುಡುಕುವಳು. ಅದು ಅವಳ ಹತ್ತಿರವಿರುವುದಿಲ್ಲ. ಮನೆಯಲ್ಲಿ ಮೇಜಿನ ಮೇಲಿಟ್ಟು ಮರೆತು ಬಂದಿದ್ದಳು. ಆ ಮೇಜಿನ ಮೇಲೆ ಆಗಟ್ ಮನೆವಾರ್ತೆ ಲೆಕ್ಕಗಳನ್ನು ಮಾಡುತ್ತಾ ಕುಳಿತಿದ್ದಳು. ಲಿಯೊನಾರ್ಡ್ಡಾ ಭಯಗ್ರಸ್ತಳಾಗುವಳು. ಆಗಟ್ ಕಾಗದವನ್ನು ಓದಿದೊಡನೆ ಬಿಷಪ್ಪಿನ ಮನೆಗೆ ಲಿಯೊನಾರ್ಡ್ಡಾವನ್ನು ಹುಡುಕಿಕೊಂಡು ಬರುವಳು. ಇನ್ನೇನು ಗತಿ?

ಕೋಪೋದ್ರೇಕಪೂರಿತಳಾಗಿ ಕಾಗದವನ್ನು ಹಿಡಿದುಕೊಂಡು ಆಗಟ್ ಪ್ರವೇಶಿಸಿ—ಆ ಕಾಗದದ ವಿಷಯದಲ್ಲಿ ಬಿಷಪ್‌ಅನ್ನು ಪ್ರಶ್ನಿಸುವಳು. ಕಾಗದದಲ್ಲಿ ಬರೆದಿರುವುದು ತನ್ನ ಅಭಿಪ್ರಾಯವೆಂದು ಬಿಷಪ್ ಒಪ್ಪಿಕೊಂಡಾದಮೇಲೆ—ಅವನ ಮನೆಯಲ್ಲಿರುವುದಕ್ಕೋಸ್ಕರ ಲಿಯೊನಾರ್ಡ್ಡಾವನ್ನು ಬಲಿಕೊಡಲು ಒಪ್ಪುವುದಿಲ್ಲವೆಂದು ಹೇಳುವಳು. ಲಿಯೊನಾರ್ಡ್ಡಾವಿಲ್ಲದ ಸ್ವರ್ಗವೂ ಸ್ವರ್ಗಸುಖಗಳೂ ತನಗೆ ಬೇಡವೆನ್ನುವಳು. "ಹಾಗ್‌ಬಾರ್ಟ್ಟ್ ಎಲ್ಲಿ?" ಎಂದು ಕೋಪಿಸಿಕೊಂಡು ಕೇಳುವಳು. ಆ ಸಮಯಕ್ಕೆ ಹಾಗ್‌ಬಾರ್ಟ್ಟ್ ಬಂದು ಲಿಯೊನಾರ್ಡ್ಡಾವಿನ ಸಂಗಡ ಮಾತಾಡಲು ಆರಂಭಿಸುವನು. ಈಚೀಚಿಗೆ ಹಾಗ್‌ಬಾರ್ಟ್ಟ್ ಲಿಯೊನಾರ್ಡ್ಡಾವಿನ ಮನೆಗೆ ಹೋದಾಗಲೆಲ್ಲಾ ಅವಳೊಡನೆ ಸಲ್ಲಾಪಗಳಲ್ಲಿ ಮಗ್ನನಾಗಿ ಆಗಟ್ ಅಲ್ಲಿದ್ದರೂ ಕೂಡ ಕಾಣದ ಹಾಗೆ ಇರುತ್ತಿದ್ದನು. ಒಂದು ವೇಳೆ ಆಗಟ್‌ನೊಡನೆ ಮಾತಾಡಿದರೂ —ಆಗಲೂ ಲಿಯೊನಾರ್ಡ್ಡಾ ವಿಷಯವಾಗಿಯೇ ಮಾತಾಡುತ್ತಿದ್ದ. ಹಾಗ್‌ಬಾರ್ಟ್ಟಿನ ಈ ಅನಾದರಣೆ ಆಗಟ್‌ನ ಮನಸ್ಸನ್ನು ನೋಯಿಸಿ ಅವನ ಪ್ರೀತಿಯ ವಿಷಯದಲ್ಲಿ ಶಂಕೆಯನ್ನು ಉಂಟುಮಾಡಿತ್ತು. ಕಾಲಕ್ರಮೇಣ ಹಾಗ್‌ಬಾರ್ಟ್ಟ್ ತನ್ನನ್ನು ಪ್ರೀತಿಸುವುದರ ಬದಲು ಲಿಯೊನಾರ್ಡ್ಡಾವನ್ನು ಪ್ರೀತಿಸುತ್ತಿದಾನೆಂದು ಆಗಟ್‌ನ ಅಂತರಂಗದಲ್ಲಿ ಖಚಿತವಾಗಿತ್ತು. ಬಿಷಪ್ಪಿನ ಮನೆ

ಯಲ್ಲಿ ಹಾಗ್‌ಬಾರ್ಟಿನ ನಡತೆಯನ್ನು ನೋಡಿ ಅವಳ ಕೋಪವು ಇಮ್ಮಡಿಯಾಯಿತು. ತನ್ನ ಸೋದರತ್ತಿಗೆ ಅಪಮಾನಕರವಾದ ಅಂಥಾ ಕಾಗದವನ್ನು ಬಿಷಪ್ ಬರೆಯದಂತೆ ಏಕೆ ತಡೆಯಲಿಲ್ಲವೆಂದು ಹಾಗ್‌ಬಾರ್ಟ್‌ಅನ್ನು ಆಗಟ್ ಕೇಳುವಳು. ಅವನು ಕನಸಿನಲ್ಲಿರುವಂತೆ ಏನೇನೋ ಹೇಳುವನು. ಅವನ ಉತ್ತರಗಳು ಆಗಟ್‌ಗೆ ಸಮರ್ಪಕವಾಗಿ ಕಾಣುವುದಿಲ್ಲ. ಅದಕ್ಕೋಸ್ಕರ ಆಗಟ್ ಅವನನ್ನು ನಿಂದಿಸುವಳು. ಆಗಟ್‌ಅನ್ನು ಪ್ರೀತಿಸುತ್ತಿರುವ ಹಾಗ್‌ಬಾರ್ಟ್‌ಅನ್ನು ಹಾಗೆ ನಿಂದಿಸುವುದು ನ್ಯಾಯವಲ್ಲವೆಂದು ಅವನ ಕಡೆ ವಹಿಸಿಕೊಂಡು ಲಿಯೊನಾರ್ಡಾ ಹೇಳುವಳು. ಇದನ್ನು ಕೇಳಿ ಆಗಟ್‌ಗೆ ಸ್ಥೈರಣೆಕೆಟ್ಟು ಮಿತಿಮೀರಿದ ಕೋಪದಿಂದ-ಹಾಗ್‌ಬಾರ್ಟ್ ಪ್ರೀತಿಸುತ್ತಿರುವುದು ಈಗ ಆಗಟ್‌ಅನ್ನು ಅಲ್ಲ-ಲಿಯೊನಾರ್ಡಾವನ್ನು ಎಂಬ ಒಳಗುಟ್ಟನ್ನು ಬಹಿರಂಗಪಡಿಸುವಳು. ಎಲ್ಲರಿಗೂ ಸಿಡಿಲು ಬಡಿದಂತಾಗುವುದು! ಬಿಷಪ್ಪಿನ ಬುದ್ಧಿವಾದದ ಮೇಲೆ ಕೆಲವು ಕಾಲ ಹಾಗ್‌ಬಾರ್ಟ್ ಊರುಬಿಟ್ಟು ಹೋಗಲು ಸಮ್ಮತಿಸುವನು. ಲಿಯೊನಾರ್ಡಾ ಮತ್ತು ಆಗಟ್‌ಗಳ ಮಧ್ಯೆ ಸ್ವಲ್ಪ ವಿರಸವಾದ ಮಾತುಗಳಾಗುವುವು. ಕೊನೆಗೆ ರಾಜಿಮಾಡಿಕೊಂಡು ಮನೆಗೆ ಹಿಂತಿರುಗುವರು. ಆಗಟ್ ಕೂಡ ಕೆಲವು ಕಾಲ ಊರುಬಿಟ್ಟು ಹೋಗಲು ನಿಶ್ಚಯಿಸುವಳು.

ಎರಡನೆಯ ಅಂಕ ಇಲ್ಲಿಗೆ ಮುಗಿಯುವುದು.

## ಮೂರನೆಯ ಅಂಕ

ಇಬ್ಬರು ಹೆಂಗಸರು, ಒಬ್ಬ ಗಂಡಸು—ಇವರ ಮಧ್ಯದಲ್ಲಿ ಒಂದು ಬೃಹತ್ಸಮಸ್ಯೆ ಎದ್ದಿತು. ಪ್ರಣಯವೆಂಬ ಹುಚ್ಚುಹೊಳೆಯಲ್ಲಿ ಸಿಕ್ಕಿಕೊಂಡು ಕೊಚ್ಚಿಹೋಗುತ್ತಿದಾರೆ. ರಭಸಪ್ರವಾಹವು ಮೂವರನ್ನೂ ತನ್ನ ಸುಳಿಗಳಲ್ಲಿ ಸಿಕ್ಕಿಸಿಕೊಂಡು ಸೆಳೆದುಕೊಂಡುಹೋಗುತ್ತಿದೆ. ಎಲ್ಲಿಗೆ? ಹಾಗ್‌ಬಾರ್ಟ್‌ಮತ್ತು ಆಗಟ್ ಇಬ್ಬರೂ ಬೇರೆಬೇರೆ ಸ್ಥಳಗಳಿಗೆ ಹೋಗಿದ್ದಾರೆ. ಪ್ರಶಾಂತವಾದ ಸ್ಥಳದಲ್ಲಿ ಪ್ರತಿಯೊಂದನ್ನೂ ನಿಧಾನವಾಗಿ ಸಮಾಧಾನಚಿತ್ತದಿಂದ ಪರಿಶೀಲಿಸಿ—ಕದಡಿದ ಮನಸ್ಸನ್ನು ತಿಳಿಮಾಡಿ-ಆತ್ಮಸಾಕ್ಷಿಯಾಗಿ ತಮ್ಮ ಮನೋ

ಭಾವಗಳ ಖಚಿತಸ್ಥಾನವನ್ನು ತಿಳಿದುಕೊಳ್ಳುವುದಕ್ಕೆ ಬೇರೆಬೇರೆ ಸ್ಥಳಗಳಿಗೆ ಹೋಗಿ ಕೆಲವು ದಿನಗಳಾಗಿವೆ.

ಒಂದು ದಿನ ಲಿಯೊನಾರ್ಡಾ ತನ್ನ ಮನೆಯ ತೋಟದಲ್ಲಿ ಸೇಬಿನಹಣ್ಣು ಗಳನ್ನು ಕುಯ್ಯುತ್ತಾ–ಆಗಟ್‌ಅನ್ನು ಊರಿಗೆ ವಾಪಸ್ಸು ಕರೆಸಿಕೊಳ್ಳಲು ಏರ್ಪಾಟು ಮಾಡುತ್ತಿದ್ದಾಳೆ. ಇದು ಮೂರನೆ ಅಂಕದ ಪ್ರಾರಂಭ. ಆ ಸಮಯಕ್ಕೆ ಸರಿಯಾಗಿ ಹಾಗ್‌ಬಾರ್ಟ್ ಪ್ರವೇಶಿಸುವನು. ಪರಸ್ಪರ ಸಂದರ್ಶನ ವಾಗುವುದು. ಅದೇ ತಾನೆ ಊರಿಗೆ ವಾಪಸ್ಸು ಬಂದೆನೆಂದೂ—ಮೊತ್ತ ಮೊದಲು ಲಿಯೊನಾರ್ಡಾವನ್ನು ನೋಡಲು ಆತುರನಾಗಿ ಬಂದಿರುವುದಾಗಿಯೂ ಹೇಳುವನು. ಲಿಯೊನಾರ್ಡಾವಿನ ಮನಸ್ಸಿನಲ್ಲಿ ಗಲಿಬಿಲಿಯಾಗುವುದು. ಆದರೂ ಧೈರ್ಯವನ್ನು ತಾಳಿ, ಆಗಟ್ ಊರಿನಲ್ಲಿಲ್ಲವಾದ್ದರಿಂದ ಅವನನ್ನು ಮನೆಬಿಟ್ಟು ಕಳುಹಿಸಲು ಪ್ರಯತ್ನಪಡುವಳು. ಲಿಯೊನಾರ್ಡಾವನ್ನು ನೋಡುವುದೇ ತನ್ನ ಮುಖ್ಯೋದ್ದೇಶವೆಂದು ಹೇಳಿ, ಅವಳು ಅಲ್ಲಿಂದ ಹೋಗದ ಹಾಗೆ ತಡೆಗಟ್ಟಿ ತನ್ನ ಅಂತರಂಗವನ್ನು ಬಿಚ್ಚಿ ಹೇಳುವನು. ಪ್ರಾರಂಭದಲ್ಲಿ ಆಗಟ್‌ನಲ್ಲಿ ಮೂಡಿದ್ದ ಪ್ರೀತಿ ಈಗ ಇಲ್ಲವೆಂದೂ, ತಾನು ಪ್ರೀತಿಸುತ್ತಿರುವುದು ಲಿಯೊನಾರ್ಡಾವನ್ನು ಮಾತ್ರವೇ ಎಂದೂ ಮೋಹಾವೇಶ ಪೂರಿತವಾದ ಮಾತುಗಳಿಂದ ತನ್ನ ಅನುರಾಗವನ್ನು ವ್ಯಕ್ತಪಡಿಸುವನು. ಲಿಯೊನಾರ್ಡಾ ತಂದೊಡ್ಡಿದ ಪ್ರತಿಯೊಂದು ಆಕ್ಷೇಪಣೆಗೂ ಉತ್ತರಗಳನ್ನು ಕೊಟ್ಟು, ಅವಳು ಒಲಿದು ಇನ್ನು ಮುಂದೆ ತನ್ನ ಜೊತೆಯಲ್ಲಿ ಜೀವನ ಯಾತ್ರೆಯನ್ನು ನಡಸಬೇಕೆಂದು ಬಗೆಬಗೆಯಾಗಿ ಒತ್ತಾಯಪಡಿಸುವನು. ಅವರಿಬ್ಬರಿಗೂ ಇರುವ ವಯಸ್ಸಿನ ತಾರತಮ್ಯ, ಸಮಾಜದಲ್ಲಿ ಬರುವ ಆಕ್ಷೇಪಣೆಗಳು—ಮೇಲಾಗಿ ಆಗಟ್‌ಅನ್ನು ವಂಚಿಸಿ ಮಾಡಿದ ದ್ರೋಹ—ತಾನು ಸಾಕಿ ಸಲಹಿ ತನ್ನ ಸ್ವಂತ ಮಗಳಂತಿರುವ ಮತ್ತು ಹಾಗ್‌ಬಾರ್ಟ್ ಅನ್ನು ಪ್ರೀತಿಸುತ್ತಿರುವ ಹುಡುಗಿಗೆ ಆಗುವ ದ್ರೋಹ— ಇವೆಲ್ಲವನ್ನೂ ಲಿಯೊನಾರ್ಡಾ ವಿವರಿಸಿ, ಹಾಗ್‌ಬಾರ್ಟ್ ಮಾಡಹೇಳುವುದು ಅನುಚಿತ ಕಾರ್ಯವೆಂದೂ ಪುನಃಪುನಃ ಮನವರಿಕೆ ಮಾಡುವಳು. ಎಲ್ಲಾ ಆಕ್ಷೇಪಣೆ ಗಳಿಗೂ ತನ್ನ ಉಜ್ವಲವಾದ ಮಾತುಗಳಲ್ಲಿ ಉತ್ತರಕೊಡುವನು. ಅವನ ಮಾತುಗಳನ್ನು ಕೇಳುತ್ತಾ ಅರ್ಥಮಾಡಿಕೊಳ್ಳುತ್ತಾ, ತಾನು ವರ್ಷಗಳ

ಸಾಧನೆಯಿಂದ ಪಡೆದಿದ್ದ ಮನೋನಿಗ್ರಹಣಶಕ್ತಿ ಕುಸಿದುಹೋಗಿ ಲಿಯೊನಾರ್ಡ್ಡಾ ಅಳುವುದಕ್ಕಾರಂಭಿಸುವಳು. ಹಾಗ್‌ಬಾರ್ಟ್ ಅವಳ ಹತ್ತಿರ ಸರಿಯಲು, ಅವನನ್ನು ತಡೆದು ದೂರದಲ್ಲೇ ನಿಲ್ಲಿಸಿ-ಮನಸ್ಸನ್ನು ಸ್ವಲ್ಪ ಶಮನ ಮಾಡಿಕೊಂಡು ಅವನಿಗೆ ತನ್ನ ಅಂತರಂಗವನ್ನು ಬಿಚ್ಚಿತೋರಿಸಿ, ತಾನು ಕೂಡ ಅವನಲ್ಲಿ ಮೋಹಪರವಶೆಯಾಗಿ ಅವನನ್ನು ಪ್ರೀತಿಸುತ್ತಿರುವುದಾಗಿ ಒಪ್ಪಿಕೊಂಡು, ಅದರಿಂದ ತನಗೆ ತನ್ನ ಜೀವಮಾನದಲ್ಲಿ ಎಂದೂ ಆಗದಷ್ಟು ಆನಂದವಾಗಿದೆಯೆಂದೂ, ಅಂಥಾ ಸುಖವು ತನ್ನ ಪಾಲಿಗೆ ಬರುವುದೆಂದು ಕನಸು ಕೂಡ ಕಂಡಿರಲಿಲ್ಲವೆಂದೂ, ಇನ್ನೂ ಬಗೆಬಗೆಯಾಗಿ ತನ್ನ ಮನೋಭಿಪ್ರಾಯಗಳನ್ನು ಭಾವರಸಪೂರಿತವಾದ ಮಾತುಗಳಲ್ಲಿ ಅವನಿಗೆ ನಿವೇದನೆ ಮಾಡುವಳು. ಆದರೆ ಮುಂದಿನ ವಿಷಯದಲ್ಲಿ ದುಡುಕಿ ಏನೂ ಹೇಳಲಾಗುವುದಿಲ್ಲವೆಂದೂ, ಏನನ್ನೂ ಮಾಡಲಾಗುವುದಿಲ್ಲವೆಂದೂ, ಪ್ರತಿಯೊಂದನ್ನೂ ಪ್ರಶಾಂತಚಿತ್ತದಿಂದ ಯೋಚಿಸಬೇಕಾಗಿರುವುದರಿಂದ ಅವನು ನಿಜವಾಗಿಯೂ ತನ್ನನ್ನು ಪ್ರೀತಿಸುವುದಾದರೆ, ಸದ್ಯಃ ತನ್ನನ್ನು ಬಿಟ್ಟು, ತಾನು ಪುನಃ ಹೇಳಿಕಳಿಸುವವರೆಗೆ ಹೊರಟುಹೋಗಬೇಕೆಂದೂ ಅವನಿಗೆ ಒತ್ತಾಯಮಾಡಿ ಹಾಗ್‌ಬಾರ್ಟ್‌ಅನ್ನು ಕಳುಹಿಸಿಬಿಡುವಳು. ಮತ್ತು ದೀರ್ಘಾಲೋಚನೆಯಲ್ಲಿ ಮಗ್ನಳಾಗಿ ಸ್ವಪ್ನದಲ್ಲೋ ಎನ್ನುವ ಹಾಗೆ ಆಗಟ್‌ಅನ್ನು ಹೆಸರು ಹಿಡಿದು ಕೂಗುವಳು. ಆಗಟ್ ಪ್ರವೇಶಿಸುವಳು. ಲಿಯೊನಾರ್ಡ್ಡಾ ಆಶ್ಚರ್ಯಪಟ್ಟು ಸಂತೋಷದಿಂದ ಆಗಟ್‌ಅನ್ನು ಆಲಿಂಗಿಸುವಳು.

ನವಯೌವನಾರೂಢಳಾದ ಆಗಟ್,-ರೂಪು ಶಕ್ತಿ ಸಾಮರ್ಥ್ಯಗಳಿಂದ ಕೂಡಿ ಮಧ್ಯಪ್ರಾಯದಲ್ಲಿರುವ ಲಿಯೊನಾರ್ಡ್ಡಾ-ಇಬ್ಬರೂ ಪ್ರಥಮ ಪ್ರಾಯದಲ್ಲಿರುವ ಹಾಗ್‌ಬಾರ್ಟಿನ ಮೋಹಜಾಲದಲ್ಲಿ ಸಿಕ್ಕಿಬಿದ್ದಿದ್ದಾರೆ. ಸದ್ಯಃ ಹಾಗ್‌ಬಾರ್ಟ್ ಪ್ರೌಢೇಚ್ಛಾರೂಢಳಾದ ಲಿಯೊನಾರ್ಡ್ಡಾ ವ್ಯಾಮೋಹದಲ್ಲಿ ಮುಳುಗಿದ್ದಾನೆ. ಕುಶಲಪ್ರಶ್ನೆಗಳಾದ ಮೇಲೆ ಆಗಟ್ ಬೆಟ್ಟದ ಮೇಲಿದ್ದ ಕಾಲದಲ್ಲಿ ತನಗೆ ಆದ ಅನುಭವಗಳನ್ನು ಲಿಯೊನಾರ್ಡ್ಡಾಗೆ ಹೇಳುತ್ತಾಳೆ.

ಆಗಟ್ ಹೇಳುವಳು—"ಅತ್ತೆ, ಬೆಟ್ಟದ ಮೇಲೆ ನಮ್ಮ ತೋಟದ ಮನೆಯಲ್ಲಿ ಎಲ್ಲಾ ಅನುಕೂಲವಾಗಿತ್ತು. ನಾನೊಬ್ಬಳೇ-ಸುಂದರವಾದ ಪ್ರದೇಶ; ರಮಣೀಯವಾದ ಸರೋವರ; ಒಳ್ಳೆಯ ಹವಾ; ಸ್ವಚ್ಛವಾದ ಗಾಳಿ,

ನೀರು ; ಎಲ್ಲೆಲ್ಲೂ ನಿಶ್ಯಬ್ದ ; ಎತ್ತ ನೋಡಿದರೂ ನಿರವಧಿಕವಾದ ಅನಂತ ವಾದ ಆಕಾಶ. ನಿಜವಾಗಿಯೂ ಶಾಂತಿಮಯವಾದ ಸ್ಥಳ. ಆ ಶಾಂತಿಯು ನನ್ನ ಮನಸ್ಸನ್ನು ಆವರಿಸಿತು. ಎಂಟು ವರ್ಷಗಳಿಂದಲೂ ನಿನ್ನ ತನು ಮನ ಧನ ಸರ್ವಸ್ವವನ್ನೂ ನನಗಾಗಿ ಮೀಸಲಿಟ್ಟು ಎಲ್ಲವನ್ನೂ ತ್ಯಾಗಮಾಡಿ ಚಿಕ್ಕ ವಳಾಗಿದ್ದ ನನ್ನನ್ನು ಸಾಕಿ ಸಲಹಿ ಸುಶಿಕ್ಷಿತಳಾದ ದೊಡ್ಡವಳನ್ನಾಗಿ ಮಾಡಿದೆ. ಈ ವಿಷಯವನ್ನು ಅನೇಕಾವರ್ತಿ ಮನಸ್ಸಿನಲ್ಲಿ ತಿರುವಿಹಾಕಿ ಖಚಿತ ಮಾಡಿಕೊಂಡೆ. ನಿನ್ನ ತ್ಯಾಗಕ್ಕೆ ಪ್ರತಿಯಾಗಿ ನಾನೇನೂ ಮಾಡಿಲ್ಲ ವೆಂದೂ ಸ್ಪಷ್ಟವಾಯಿತು. ಪ್ರತ್ಯುಪಕಾರವನ್ನು ಏನು ಮಾಡಬಲ್ಲೆ ? ಯಾವುದು ತಾನೆ ನಿನ್ನ ಮಹದುಪಕಾರಕ್ಕೆ ಸರಿಸಮಾನವಾದೀತು ? ನಾನೇನು ಮಾಡಿದರೂ ಅದು ಅತ್ಯಲ್ಪವಾಗಿಯೇ ಇರುವುದು. ನಾನು ನಿನಗೆ ಎಂದಿಗೂ ಸಮಾನಳಾಗಲಾರೆ—ಇವೆಲ್ಲ ನನಗೆ ಚೆನ್ನಾಗಿ ಅರಿವಾದವು. ಇದ ರಿಂದ ಮನಸ್ಸು ತಿಳಿಯಾಯಿತು. ಹೊತ್ತಿದ್ದ ಭಾರ ಇಳಿದಂತಾಯಿತು. ಮನಸ್ಸಿನ ಸ್ವಾರ್ಥಭಾವನೆ ಬಿಟ್ಟಿತು. ಕಾಡುತ್ತಿದ್ದ ಆತಂಕ ಹೋಯಿತು. ಮುಂದಿನ ಕೆಲಸ ಸ್ಪಷ್ಟವಾಯಿತು."

ಲಿಯೊನಾರ್ಡಾ ಕುತೂಹಲದಿಂದ ಆಲೈಸಿ ಕೇಳುವಳು. ಮಧ್ಯೆ ಮಧ್ಯೆ ಆಗಟ್‌ಅನ್ನು ಪುಸಲಾಯಿಸುವಂತೆ ಕೆಲವು ಪ್ರಶ್ನೆಗಳನ್ನು ಹಾಕುವಳು. ಲಿಯೊನಾರ್ಡಾ ಮನಸ್ಸು ವಿವಿಧ ಭಾವಗಳಿಂದ ಕೂಡಿ ಗಲಿಬಿಲಿಯಾಗಿತ್ತು. ಆಗಟ್ ಮುಂದುವರಿಯುವಳು :

"ಹಾಗ್‌ಬಾರ್ಟ್ ನಿನ್ನನ್ನು ಪ್ರೀತಿಸುತ್ತಿದಾನೆ. ನನ್ನ ಮೇಲೆ ಅವನ ಪ್ರೀತಿ ಈಗ ಇಲ್ಲ ; ನಿನಗೆ ಅವನು ಇಷ್ಟನಾಗಿದ್ದಾನೆ. ಆದ್ದರಿಂದ ಅವನನ್ನು ನಿನಗೆ ಮನಃಪೂರ್ವಕವಾಗಿ ಬಿಟ್ಟುಕೊಡುತ್ತೇನೆ. ಅವನೊಡನೆ ನೀನು ಸುಖವಾಗಿರುವುದು ನನಗೂ ಸಂತೋಷವೆ! ನಿನಗೆ ಅಷ್ಟನ್ನೂ ಮಾಡ ಲಾರೆನೆ ? ಆದರೆ ಹಾಗ್‌ಬಾರ್ಟ್‌ನ ಮೇಲೆ ನನಗೆ ತುಂಬಾ ಕೋಪವಿತ್ತು. ನನ್ನನ್ನು ಪ್ರೀತಿಸಿ ಮದುವೆಯಾಗುತ್ತೇನೆಂದು ಹೇಳಿ ನಿನ್ನ ಪರಿಚಯವಾದ ಮೇಲೆ ನಿನ್ನಲ್ಲಿ ಅನುರಕ್ತನಾಗಿ ನನ್ನನ್ನು ಮೂಲೆಗೆ ಒತ್ತರಿಸಿದ. ಆಗ ನನಗೆ ಬಹಳ ಸಂಕಟವಾಯಿತು. ಹೊರಗಡೆ ತೋರಿಸುತ್ತಿರಲಿಲ್ಲ. ರಾತ್ರಿಯ ಹೊತ್ತು ನಿದ್ರೆಯಿಲ್ಲದೆ ಕೊರಗುತ್ತಿದ್ದೆ. ಅದೇ ಸಮಯದಲ್ಲಿ ಬಿಷಪ್ಪಿನ

ಕಾಗದವನ್ನು ತಡೆಯಲಿಲ್ಲವೆಂದು ಅವನ ಮೇಲೆ ಕೋಪ ಉಕ್ಕಿಬಂದು ತಡೆಯಲಾರದೆ ಅವನ ಗುಟ್ಟನ್ನು ಹೊರಗೆಡಹಿದೆ. ಆಮೇಲೆ ಬೆಟ್ಟದ ಮೇಲಕ್ಕೆ ವಿಶ್ರಾಂತಿಗೋಸ್ಕರ ಹೋದೆ."

ಲಿಯೊನಾರ್ಡ್ ಆಶ್ಚರ್ಯಪಟ್ಟುಕೊಂಡು ಎಲ್ಲವನ್ನೂ ಕೇಳುವಳು. ಕೆಲವು ವೇಳೆ ಆತುರದಿಂದ ಏನನ್ನಾದರೂ ಪ್ರಶ್ನೆ ಹಾಕುವಳು. ಆಗಟ್ ಮುಂದುವರಿಯುವಳು :

"ಹಾಗ್‌ಬಾರ್ಸ್ಟ್‌ನ ಮೇಲೆ ಈಗ ನನಗೆ ಕೋಪವಿಲ್ಲ. ಅವನು ಮಾಡಿದ್ದು ಸರಿಯೆಂದು ಈಗ ನನಗೆ ಮನಸ್ಸಿನಲ್ಲಿ ದೃಢವಾಗಿದೆ. ನಿನ್ನನ್ನು ನೋಡುವುದಕ್ಕೆ ಮುಂಚೆ ನನ್ನಲ್ಲಿ ಮೋಹಗೊಂಡು ಮದುವೆ ಮಾಡಿಕೊಳ್ಳಲು ಒಪ್ಪಿದ. ಅತ್ತೆ, ನೀನೇ ಹೇಳು ನಾವಿಬ್ಬರೂ ಜೊತೆಯಲ್ಲಿದ್ದಾಗ್ಗೆ ನಮ್ಮಿಬ್ಬರನ್ನೂ ಹೋಲಿಸಿ ನೋಡಿದರೆ ಯಾವನು ತಾನೆ ನನ್ನ ಕಡೆ ತಿರುಗಿ ಕಣ್ಣೆತ್ತಿ ನೋಡಿ ನನ್ನನ್ನು ಮೆಚ್ಚಿಯಾನು? ರೂಪು, ಯೌವನ, ಬುದ್ಧಿಶಕ್ತಿ, ಕಾರ್ಯಸಾಮರ್ಥ್ಯ ಮತ್ತು ತ್ಯಾಗಸ್ವಭಾವ ಇವುಗಳಿಂದೊಡಗೂಡಿದ ನೀನೆಲ್ಲಿ – ನಾನೆಲ್ಲಿ? ಹಾಗ್‌ಬಾರ್ಸ್ಟ್‌ನ ಆಯ್ಕೆ ಶ್ಲಾಘ್ಯವಾದದ್ದು ಮತ್ತು ಹಾಗೇ ಆಗಬೇಕಾದ್ದು ಎಂದು ಒಪ್ಪಿ ಮುಂಚೆ ಹೇಳಿದಂತೆ ಅವನನ್ನು ನಾನು ಬಿಟ್ಟುಕೊಡುತ್ತೇನೆ. ಆದರೆ ಅವನ ಮೇಲಿನ ಪ್ರೀತಿ ನನಗೇನೂ ಒಂದೇ ಸಮನಾಗಿರುವುದು...."

ಕೊನೆಯ ಮಾತುಗಳನ್ನು ಕೇಳಿ ಲಿಯೊನಾರ್ಡ್ ಮೂರ್ಛೆ ಹೋದಂತಾಗುವಳು. ಹೆದರಿಕೊಂಡು ಔಷಧಿಯನ್ನು ತರಲು ಆಗಟ್ ಒಳಗೆ ಹೋಗುವಳು. ಆ ಸಮಯದಲ್ಲಿ ಅಲ್ಲಿದ್ದ ಹ್ಯಾನ್ಸ್‌ಅನ್ನು ಕರೆದು, ಕುದುರೆಯ ಮೇಲೆ ಹೋಗಿ, ಎಲ್ಲಿದ್ದರೂ ಜನರಲ್ ರೋಸೆನ್‌ಅನ್ನು ತಡ ಮಾಡದೆ ಬರಮಾಡಬೇಕೆಂದು ಲಿಯೊನಾರ್ಡ್ ಆಜ್ಞಾಪಿಸುವಳು. ಔಷಧಿಯೊಡನೆ ಆಗಟ್ ಹಿಂತಿರುಗುವಳು. ಔಷಧಿ ಬೇಡವೆನ್ನುವಳು ಲಿಯೊನಾರ್ಡ್! ಏನಾಗಿತ್ತು? ಎಂಬ ಪ್ರಶ್ನೆಗೆ "ಬೇಸಿಗೆ ಕಾಲದಲ್ಲಿ ಹವಾದೋಷದಿಂದ ಕೆಲವರಿಗೆ ಬರುವ ಒಂದು ವಿಷಮ ಸೊಕ್ಕು!" ಎಂದು ಲಿಯೊನಾರ್ಡ್ ಉತ್ತರ ಹೇಳುವಳು.

ಇಲ್ಲಿಗೆ ಮೂರನೆಯ ಅಂಕ ಮುಗಿಯುವುದು.

## ನಾಲ್ಕನೆಯ ಅಂಕ

ಅದೇ ರಾತ್ರಿ ಬಿಷಪ್ಪಿನ ಮನೆಯಲ್ಲಿ ಲಿಯೊನಾರ್ಡಾ ಪ್ರವೇಶದೊಡನೆ ನಾಲ್ಕನೆಯ ಅಂಕ ಪ್ರಾರಂಭವಾಗುವುದು. ಪ್ರಯಾಣಸನ್ನದ್ಧಳಾಗಿ ಉಚಿತವಾದ ಉಡುಪನ್ನು ಧರಿಸಿಕೊಂಡು, ಒಂದು ಪೆಟ್ಟಿಗೆ ಮತ್ತು ಶಾಲನ್ನು ಹಿಡಿದುಕೊಂಡು ಲಿಯೊನಾರ್ಡಾ ಪ್ರವೇಶಿಸುವಳು. ಆಶ್ಚರ್ಯದಿಂದ ಕೂಡಿ ಬಿಷಪ್ ಅವಳನ್ನು ಒಳಕ್ಕೆ ಕರೆತರುವನು. ಹಾಗ್‌ಬಾರ್ಟ್ ಮನೆಯಲ್ಲಿದ್ದಾನೆಯೆ ಎಂದು ವಿಚಾರಿಸಿ, ಇಲ್ಲದಿರುವುದನ್ನು ತಿಳಿದು ಅವನು ಬರುವುದರೊಳಗೆ ತನ್ನ ಕೆಲಸವನ್ನು ಮುಗಿಸುತ್ತೇನೆಂದು ಹೇಳಿ—ಬಿಷಪ್ಪಿನ ಪ್ರಶ್ನೆಯೊಂದಕ್ಕೆ ತಾನು ಆ ರಾತ್ರಿಯೇ ಆ ಊರನ್ನು ಬಿಟ್ಟು ಇಂಗ್ಲೆಂಡಿಗೆ ಹೋಗುವವಳಾಗಿದ್ದೇನೆಂದು ಉತ್ತರ ಹೇಳುವಳು. "ನೀವು ಹಿಂದೆ ಇಷ್ಟಪಟ್ಟಂತೆಯೇ ಈಗ ಆಗಿದೆ. ನಾನು ಪ್ರಯಾಣ ಮಾಡುವುದಕ್ಕೆ ಮುಂಚೆ ಈ ಕಾಗದ ಪತ್ರಗಳನ್ನು ನಿಮ್ಮ ವಶಕ್ಕೆ ಒಪ್ಪಿಸಿಹೋಗೋಣವೆಂದು ಬಂದೆ. ಈ ಪತ್ರಗಳ ಪ್ರಕಾರ ನನ್ನ ಆಸ್ತಿಪಾಸ್ತಿಗಳೆಲ್ಲವೂ ಆಗಟ್‌ಗೆ ಬಿಟ್ಟವೆ. ಮತ್ತು ತಾವು ಆಸ್ತಿಗಳ ನಿಕ್ಷೇಪವನ್ನು ವಹಿಸಿಕೊಂಡು ಆಗಟ್‌ನ ಪಾಲಕರಾಗಿರಬೇಕೆಂದು ನಮೂದಿಸಿದೆ. ತಾವು ಈ ಪ್ರಾರ್ಥನೆಯನ್ನು ನಡಸಿಕೊಟ್ಟು, ಆಗಟ್‌ಅನ್ನು ಕಾಪಾಡಿಕೊಂಡು ಬರಬೇಕು. ಅವಳ ಭವಿಷ್ಯ ಇನ್ನು ಮೇಲೆ ತಮಗೆ ಸೇರಿದ್ದು" ಎಂದು ಹೇಳಿ ಪತ್ರಗಳನ್ನು ಬಿಷಪ್‌ನ ಕೈಗೆ ಕೊಡುವಳು.

ಬಿಷಪ್ಪಿಗೆ ವಿಸ್ಮಯವಾಗುವುದು. ತಾನಾಗಿಯೇ ಈಗ ಮಾಡುತ್ತಿರುವ ಕೆಲಸವನ್ನು ಮಾಡು ಎಂಬುದಾಗಿ ಲಿಯೊನಾರ್ಡಾಳಿಗೆ ಬಿಷಪ್ ಕಾಗದವನ್ನು ಬರೆದಾಗ ಅವಳು ಅದಕ್ಕೆ ಒಪ್ಪಲಿಲ್ಲ; ಆಗಟ್ ಕೂಡ ಒಪ್ಪಲಿಲ್ಲ. ಆ ಕಾಗದದ ಕಾರಣದಿಂದ ರಂಪರಾಧ್ಧಾಂತವಾಗಿ ಹೋಯಿತು. ಹಠಾತ್ತನೆ ಲಿಯೊನಾರ್ಡಾಳ ಮನೋವೃತ್ತಿಯಲ್ಲಿ ಆದ ಬದಲಾವಣೆಗೆ ಕಾರಣವನ್ನು ಬಿಷಪ್ ಲಿಯೊನಾರ್ಡಾಳನ್ನು ಕೇಳದೇ ಇದ್ದರೂ ಊಹಿಸಬಲ್ಲವನಾಗಿದ್ದನು.

ಲಿಯೊನಾರ್ಡಾ—ಹಾಗ್‌ಬಾರ್ಟ್ರ ಅನ್ಯೋನ್ಯ ಪ್ರಣಯನಿವೇದನವಾದ ಮೇಲೆ ಲಿಯೊನಾರ್ಡಾ ಆ ಊರಲ್ಲಿದ್ದರೆ ಯಾರಿಗೂ ಏನೂ ಸುಖವಿರುತ್ತಿರಲಿಲ್ಲ. ತಾತ್ಕಾಲಿಕವಾಗಿ ಆಗಟ್‌ನ ಕಡೆ ಹಾಗ್‌ಬಾರ್ಟ್ ವಿಮುಖನಾಗಿದ್ದರೂ,

ಆಗಟ್ ಅವನಲ್ಲಿ ಗಾಢ ಪ್ರೇಮವನ್ನು ಇಟ್ಟಿದ್ದರಿಂದ, ತಾನು ಕಣ್ಮರೆಯಾಗಿದ್ದರೆ ಪುನಃ ಅವರಿಬ್ಬರ ನಡುವೆ ಪ್ರೇಮವು ಸ್ಫುರಿಸುವುದೆಂದು ದೃಢವಾಗಿ ನಂಬಿ, ಆಗಟ್‌ಗೋಸ್ಕರ ಮತ್ತೊಂದು ತ್ಯಾಗ ಮಾಡುವುದು ತನ್ನ ಕರ್ತವ್ಯವೆಂದು ನಿಶ್ಚಯಿಸಿ, ಅಲ್ಲದೆ ತನಗಿಂತಲೂ ಚಿಕ್ಕವನಾದ ಹಾಗ್‌ಬಾರ್ಟ್‌ನೊಡನೆ ಪ್ರೇಮಾನುಬಂಧವು ನಿಷಿದ್ಧವೆಂದೂ, ಸಮಾಜ ಸಂಪ್ರದಾಯಗಳಿಗೆ ವಿರುದ್ಧವೆಂದೂ, ತರುಣ ತರುಣಿಯರ ಮಧ್ಯೆ ಅಡ್ಡಲಾಗಿ ಬಂದು ಆಗಟ್‌ಗೆ ಪರಮ ದ್ರೋಹ ಮಾಡಿದಂತಾಗುತ್ತದೆಯೆಂದೂ ಯೋಚಿಸಿ ಮನೋನಿಗ್ರಹ ಮಾಡಿ ಉದಾತ್ತಭಾವನೆಗಳಿಂದೊಡಗೂಡಿ ತನ್ನ ಆಸ್ತಿಪಾಸ್ತಿಗಳನ್ನೆಲ್ಲಾ ಆಗಟ್‌ಗೆ ಮಾಡಿ ಅವಳನ್ನು ಬಿಷಪ್‌ನ ರಕ್ಷಣೆಯಲ್ಲಿ ಬಿಟ್ಟು ಲಿಯೊನಾರ್ಡಾ ದೇಶಾಂತರ ವಾಸಕ್ಕೆ ಸಿದ್ಧಳಾಗುವಳು.

ವಿಧಿವಶದಿಂದ ಒಂದು ಬಲತರವಾದ ಪ್ರೇಮಪ್ರವಾಹದ ಸೆಳೆತಕ್ಕೆ ಸಿಕ್ಕಿದ್ದರೂ ಅದರಲ್ಲಿ ಕೊಚ್ಚಿಹೋಗದೆ ಸಕಾಲದಲ್ಲಿ ರಕ್ಷಿಸಿಕೊಂಡು ತನ್ನ ಸತ್ಯಪರೀಕ್ಷೆಯ ಸಮಯದಲ್ಲಿ ಯಾವ ದುಷ್ಪ್ರೇರಣೆಗಳಿಗೂ ಮರುಳಾಗದೆ ವರ್ಷಾಂತರಗಳ ಸಾಧನೆಯಿಂದ ಪಡೆದಿದ್ದ ಮನೋನಿಗ್ರಹಣ ಶಕ್ತಿಯನ್ನು ಈಗ ಉಪಯೋಗಿಸಿ ಜಯಶೀಲಳಾದ ಲಿಯೊನಾರ್ಡಾವನ್ನು ಬಿಷಪ್ ಮೆಚ್ಚಿ "ತಾನು ಅವಳ ಸ್ವಭಾವವನ್ನು ಇನ್ನೂ ಮುಂಚಿತವಾಗಿ ಅರಿಯಲಿಲ್ಲವಲ್ಲಾ" ಎಂದು ತನ್ನ ವ್ಯಥೆಯನ್ನು ಸೂಚಿಸುವನು. ಹಿಂದೆ ನಡೆದುಹೋದ ವಿಷಯಗಳಿಗೆ ಈಗ ವ್ಯಥೆಪಟ್ಟು ಪ್ರಯೋಜನವಿಲ್ಲವೆಂದು ಸೂಚಿಸಿ, ಮುಂದೆ ಆಗಬೇಕಾದ ಕಾರ್ಯವನ್ನು ಅಂದರೆ ಆಗಟ್-ಹಾಗ್‌ಬಾರ್ಟ್ ಮದುವೆಯನ್ನು ಸಾಧಿಸುವುದಕ್ಕೆ ಬಿಷಪ್ ಸರ್ವ ಪ್ರಯತ್ನಗಳನ್ನೂ ಮಾಡಬೇಕೆಂದು ಲಿಯೊನಾರ್ಡಾ ಪ್ರಾರ್ಥಿಸುವಳು. "ಹಾಗ್‌ಬಾರ್ಟ್ ಈಗ ಆಗಟ್‌ಅನ್ನು ಪ್ರೀತಿಸದೆ ಇರುವುದರಿಂದ, ಅದು ಹೇಗೆ ಸಾಧ್ಯ?" ಎಂದು ಬಿಷಪ್ ಕೇಳುವನು. ಅದಕ್ಕೆ ಉತ್ತರವಾಗಿ—"ಆಗಟ್ ಅವನಲ್ಲಿ ಗಾಢವಾದ ಪ್ರೀತಿಯನ್ನು ಎಂದಿನಂತೆ ಇಟ್ಟುಕೊಂಡಿದ್ದಾಳೆ. ಆಗಟ್ ಮತ್ತು ಹಾಗ್‌ಬಾರ್ಟ್ ಇಬ್ಬರೂ ನನ್ನನ್ನು ಪ್ರೀತಿಸುತ್ತಿದ್ದಾರೆ. ಆದ್ದರಿಂದ ನನಗೆ ಪ್ರಿಯವಾದದ್ದನ್ನು ಮಾಡಲು ಇಬ್ಬರೂ ಸಿದ್ಧರಿರುವರು. ಇಬ್ಬರಿಗೂ ಇನ್ನೂ ಸಣ್ಣ ವಯಸ್ಸು! ನಾನು ಕಣ್ಮರೆಯಾಗಿರಲು, ಪ್ರತಿದಿನವೂ ಒಂದೇ ಕಡೆಯಲ್ಲಿ ವಾಸಿಸುತ್ತಿರಲು,

ಅನ್ಯೋನ್ಯಸಾಹಚರ್ಯ ಮತ್ತು ನಿಮ್ಮ ಅಜ್ಜಿಯವರ ಸಹಾನುಭೂತಿ ಮತ್ತು ಉತ್ತೇಜನವಿರಲು-ಇವುಗಳ ಪ್ರಭಾವದಿಂದ ನಾನು ನೆನೆದಿರುವ ಕಾರ್ಯ ಸಿದ್ಧಿಸುತ್ತದೆಯೆಂದು ನನಗೆ ಸಂಪೂರ್ಣ ನಂಬಿಕೆಯಿದೆ. ತಮ್ಮ ಸಹಾಯವನ್ನು ತಾವು ಹೃತ್ಪೂರ್ವಕವಾಗಿ ನೀಡಬೇಕು" ಎಂದು ಪ್ರಾರ್ಥಿಸುವಳು. ತನ್ನ ಕೈಲಾದ್ದನ್ನೆಲ್ಲವನ್ನೂ ಮಾಡುವೆನೆಂದು ಬಿಷಪ್ ಮಾತು ಕೊಡುವನು. ಅಷ್ಟು ಹೊತ್ತಿಗೆ ಲಿಯೊನಾರ್ಡ್ಡಾವನ್ನು ಹುಡುಕಿಕೊಂಡು ಜನರಲ್ ರೋಸೆನ್ ಬಂದಿರುವುದಾಗಿ ಪ್ರತೀಹಾರಿ ಬಂದು ತಿಳಿಸುವಳು. ಆಶ್ಚರ್ಯದಿಂದ ಬಿಷಪ್ ಹುಬ್ಬೇರಿಸಿ ಲಿಯೊನಾರ್ಡ್ಡಾವನ್ನು ನೋಡುವನು.

ಲಿಯೊನಾರ್ಡ್ಡಾ—"ಹೌದು. ಇಂಗ್ಲೆಂಡಿಗೆ ಹೋಗುವ ದೋಣಿಯ ನಿಶಾನೆಯಾದೊಡನೆ, ನನ್ನನ್ನು ಕರೆದುಕೊಂಡು ಹೋಗಲು ಇಲ್ಲಿಗೆ ಬರುವಂತೆ ಜನರಲ್ ರೋಸೆನ್‌ಗೆ ನಾನು ಹೇಳಿದ್ದೆ. ಆತ ನನ್ನ ಜೊತೆಯಲ್ಲಿ ಇಂಗ್ಲೆಂಡಿಗೆ ಬರುತ್ತಾನೆ."

ಬಿಷಪ್—"ಹಾಗಾದರೆ ಆತ......?"

ಲಿಯೊನಾರ್ಡ್ಡಾ—"ನನ್ನ ಗಂಡ!"

ಬಿಷಪ್—"ನೀನು ಮದುವೆಯಾಗಿ ಬೇರೆಯಾಗಿದ್ದವನೆ?"

ಲಿಯೊನಾರ್ಡ್ಡಾ—"ಹೌದು!—"

ಬಿಷಪ್—"ನಾನು ನಿನಗೆ ಅವಜ್ಞತೆಯಿಂದ ಬಹಳ ಅನ್ಯಾಯವನ್ನು ಮಾಡಿದ್ದೇನೆ. ದಯವಿಟ್ಟು ಕ್ಷಮಿಸಬೇಕು."

ಲಿಯೊನಾರ್ಡ್ಡಾ—"ಅನ್ಯಾಯ.ವೇನೋ ಆಗಿದೆ. ಆದರೆ ಈಗ ಅವುಗಳಿಗೆಲ್ಲಾ ಸಮಯವಲ್ಲ. ಹೊತ್ತಾಯಿತು. ಹೋಗಿಬರುತ್ತೇನೆ. ನನ್ನ ಪ್ರಾರ್ಥನೆಯನ್ನು ಮಾತ್ರ ನಡಸಿಕೊಡಬೇಕು. ಆಗಟ್ ಇಲ್ಲಿಗೆ ಬರ ಮಾಡಲು ಗಾಡಿಯನ್ನು ಕಳುಹಿಸಿದ್ದೇನೆ. ಅವಳು ಇಲ್ಲಿಗೆ ಬಂದಾಗ್ಗೆ ಈ ಕಾಗದವನ್ನು ಅವಳಿಗೆ ಕೊಡಬೇಕು. ಹೋಗಿಬರುತ್ತೇನೆ."

ಜನರಲ್ ರೋಸೆನ್ ಠೀಕಾಗಿ ಉಡುಪನ್ನು ಧರಿಸಿಕೊಂಡು ಬಂದು ಲಿಯೊನಾರ್ಡ್ಡಾವನ್ನು ಹೊರಗೆ ಕರೆದುಕೊಂಡುಹೋಗುವನು. ಬಿಷಪ್ ಅವರಿಬ್ಬರನ್ನೂ ಬೀಳ್ಕೊಡುವನು.

ಹಾಗ್‌ಬಾರ್ಟ್ ಬಿಷಪ್ಪಿನೊಡನೆ ಒಳಗೆ ಬರುವನು. ಲಿಯೊನಾರ್ಡ್ಡಾ

ಊರುಬಿಟ್ಟು ಹೋಗಿರುವುದು ಹಾಗ್‌ಬಾರ್ಟಿಗೆ ತಿಳಿದಿರಲಿಲ್ಲ. ಬಿಷಪ್ ತನ್ನ ಸೋದರಅಳಿಯನನ್ನು ಆದರದಿಂದ ಸ್ವಾಗತಿಸಿ–ತಾನು ಲಿಯೊನಾರ್ಡಾ ವಿಷಯ ದಲ್ಲಿ ತಪ್ಪುತಿಳಿವಳಿಕೆಯಲ್ಲಿ ಇದ್ದೆನೆಂದೂ, ಅವಳಿಗೆ ಅನ್ಯಾಯ ಮಾಡಿದ್ದೇ ನೆಂದೂ ಹೇಳಿ ಅವಳ ಗುಣಕಥನ ಮಾಡುವನು. ಹಾಗ್‌ಬಾರ್ಟಿಗೆ ಪರ ಮಾನಂದವಾಗುವುದು. ಆಗಟ್ ಬರುವಳು. ಎಲ್ಲರಿಗೂ ಕೇಳುವ ಹಾಗೆ ಲಿಯೊನಾರ್ಡಾವಿನ ಕಾಗದವನ್ನು ಓದುತ್ತಿರುವಾಗ್ಗೆ ಅವಳು ಊರುಬಿಟ್ಟು ಹೋದ ಭಾಗವನ್ನು ಓದುವಾಗ ಮೂರ್ಛೆಹೋಗುವಳು. ಹಾಗ್‌ಬಾರ್ಟ್ ಕೂಡ ಸ್ಮರಣೆ ತಪ್ಪಿದವನಂತೆ ತೂರಾಡುವನು ಸುತ್ತುಮುತ್ತಿನ ಜನರು ಅವರಿಬ್ಬರಿಗೂ ಶೈತ್ಯೋಪಚಾರವನ್ನು ಮಾಡುವರು.

ಇಲ್ಲಿಗೆ ನಾಟಕ ಮುಕ್ತಾಯವಾಗುವುದು.

---

ಓಂಕಾರ್ ಪವರ್ ಪ್ರೆಸ್, ಅರಳೇಪೇಟೆ, ಬೆಂಗಳೂರು ೨.

## ಶ್ರೀ ಎಸ್. ಜಿ. ಶಾಸ್ತ್ರಿ ಅವರ ಕೃತಿಗಳು.

### ೧. ಸೋಕ್ರಟೀಸನ ಮರಣ

(ಲಾರೆನ್ಸ್ ಹೌಸ್‌ಮನ್ ಬರೆದ Death of Socrates ನಾಟಕದ ಅನುವಾದ)

### ೨. ಆರ್ಯಕ

(ಇಬ್ಸನ್ನಿನ The Warriors at Helgeland ನಾಟಕದ ರೂಪಾಂತರ)

### ೩. ಸೂತ್ರದ ಬೊಂಬೆ

(ಇಬ್ಸನ್ನಿನ A Doll's House ನಾಟಕದ ಭಾಷಾಂತರ)

### ೪. ಮೊನ್ನ ವನ್ನ

(ಮಾರಿಸ್ ಮ್ಯಾಟರ್‌ಲಿಂಕ್ ಬರೆದ Monna Vanna ನಾಟಕದ ಅನುವಾದ)

### ೫. ಲಿಯೊನಾರ್ಡ

(ಬ್ಯೋರ್ನ್‌ಸನ್ ಬರೆದ Leonarda ನಾಟಕದ ಅನುವಾದ)

### ೬. ಇದ್ದರೂ ಇರಬಹುದು

(ಎಂಟು ಸಣ್ಣಕತೆಗಳ ಸಂಗ್ರಹ)

### ೭. ಪರಪುರುಷ

(ನಾಲ್ಕು ಸಣ್ಣಕತೆಗಳ ಸಂಗ್ರಹ)

### ೮. ಕಣ್ಣುಬಿಚ್ಚಾಲೆ

(ಮೂರು ಏಕಾಂಕ ನಾಟಕಗಳು)